


International Labour Organisation





# "ಮಾತಾಡ್ ಮಾತಾಡ್ ಗೊಂಬೆಯೇ"

## *Speak! 'O' Puppet! Speak!*

ಬಾಲ ಕಾರ್ಮಿಕ ಪದ್ಧತಿಯ ನಿರ್ಮೂಲನೆ, ಮಕ್ಕಳ ಹಕ್ಕು, ಶಿಕ್ಷಣ ಕುರಿತು ಜನರಲ್ಲಿ ಸಾಮಾಜಿಕ
ಅರಿವನ್ನು ಮೂಡಿಸಲು ಗೊಂಬೆಯಾಟದಂತಹ ಮಾಧ್ಯಮದ ಬಳಕೆ ಕುರಿತು ಒಂದು ಸ್ವಸಾಹಾಯ ಕೈಪಿಡಿ

(A Self Help Handbook of Puppet Plays to Eliminate
Child Labour and Promote Education)









"ತೊಲಗಲಿ ಬಾಲಕಾರ್ಮಿಕವೆಂಬ ಅನಿಷ್ಠ ಪದ್ಧತಿ,
ದೊರಕಲಿ ಎಲ್ಲ ಮಕ್ಕಳಿಗೂ ಶಿಕ್ಷಣದ ಸದ್ಗತಿ"



International Labour Organization
International Programme on the Elimination of Child Labour
Karnataka Child Labour Project
(Funded by the Government of Italy)

# "ಮಾತಾಡ್ ಮಾತಾಡ್ ಗೊಂಬೆಯೇ"

# ( *Speak*! 'O' 'Puppet' *Speak!* )

ಬಾಲ ಕಾರ್ಮಿಕ ಪದ್ಧತಿಯ ನಿರ್ಮೂಲನೆ, ಮಕ್ಕಳ ಹಕ್ಕು, ಶಿಕ್ಷಣ ಕುರಿತು ಜನರಲ್ಲಿ ಸಾಮಾಜಿಕ ಅರಿವನ್ನು ಮೂಡಿಸಲು ಗೊಂಬೆಯಾಟದಂತಹ ಮಾಧ್ಯಮದ ಬಳಕೆ ಕುರಿತು ಒಂದು ಕೈಪಿಡಿ

(Compendium of Puppet Plays to Eliminate Child Labour and Promote Education)





**"ಕೊಲಗಲಿ ಬಾಲಕಾರ್ಮಿಕವೆಂಬ ಅನಿಷ್ಠ ಪದ್ಧತಿ,**
**ದೊರಕಲಿ ಎಲ್ಲ ಮಕ್ಕಳಿಗೂ ಶಿಕ್ಷಣದ ಸದ್ಗತಿ"**




ಕೈಪಿಡಿಯ ಸಂಪಾದಕರು:

**Dr. Prakash Garud,**
**Puppet House, Dharwad**
**Sanjiv Kumar,**
**ILO, Bangalore**

---

Dr. Prakash Garud, Sanjiv Kumar. Eds.
"Mathadu Mathadu Gombeye" (Speak! 'O' Puppet! Speak!) :Compendium of Puppet Plays to Eliminate Child Labour and Promote Education.

New Delhi. International Labour Organisation, Sub Regional Office. 2008

ISBN (Print): 978-92-2-821416-1
ISBN (web pdf) : 978-92-2-821417-8

---



ILO publications can be obtained through major booksellers or ILO local offices in many countries, or direct from ILO Publications, International Labour Office, CH-1211 Geneva 22, Switzerland. Catalogues or lists of new publications are available free of charge from the above address, or by email: pubvente@ilo.org

Copies of this book as well as a list of publications are available free of charge on request from ILO Karnataka Child Labour Project, No.5A, Block 5, MCHS, HSR Layout, Sector VI, Bangalore 560102, India, or by email: gsuresh@ilodel.org.in.
Visit our website: www.ilo.org/publns

Printed in India

## *Foreword*

One of the core components of any Child Labour Elimination Project is effective communication and sensitization of all the relevant stakeholders. For illiterate parents, children and other stakeholders, the use of puppetry is one of the strongest medium of communication. On the World Day Against Child Labour in 2002, IPEC launched a new education and social mobilization initiative entitled: "SCREAM STOP CHILD LABOUR". SCREAM stands for "Supporting Children's Rights through Education, the Arts and the Media". Through pedagogical methodologies, such as drama, creative writing and art, SCREAM introduces young people to the complexities surrounding the issue of child labour and helps them to contribute to resolving them in a positive and constructive way.

This Self Help Handbook on the use of Puppetry to Eliminate Child Labour and the Promotion of Education is a laudable effort under SCREAM, harnessing the artistic skills of the puppet play writers and performers to sensitize and educate the wider community, as well as to mobilize them to participate in child labour elimination programmes as a part of the solution.

The novel approach tried out by the ILO-IPEC Karnataka Child Labour Project (funded by the Government of Italy) to train youth groups, school teachers and school children to use puppetry at regular school and community functions (shandies, fairs and festivals) will spread the relevant message far and wide. We congratulate Dr Prakash Garud, and Mr. Sanjiv Kumar, National Project Coordinator, ILO-IPEC Karnataka Child Labour Project, for jointly editing and bringing out this book for wider use, fulfilling a very long felt need. We trust this book will be widely used for creating awareness on child rights and child labour.

**Ms. Leyla Tegmo-Reddy,**
Director,
Sub-Regional Office for South Asia and ILO Representative in India,
Delhi.

Dated :

**Mr. BL Sridhar, IAS,**
Principal Secretary Labour,
Government of Karnataka,
Bangalore.

Dated :

# ಪರಿವಿಡಿ

| ವಿಷಯ ಪ್ರವೇಶ : | ಪುಟ ಸಂಖ್ಯೆ |
|---|---|



## ಭಾಗ 1

### "ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆ ಕುರಿತ ಗೊಂಬೆ ನಾಟಕಗಳು"

ಭಾಗ 2

## ಗೊಂಬೆ ಆಟದ ಲೋಕ (A world of Puppet Theatre)

# ಬಾಲಕಾರ್ಮಿಕ ನಿರ್ಮೂಲನೆಗೆ
# ಗೊಂಬೆ ಆಟ ಮಾಧ್ಯಮ ಬಳಕೆ ಮತ್ತು ಪ್ರಸ್ತುತ ಕೈಪಿಡಿಯ ಕುರಿತು
# ಒಂದು ಸ್ಥೂಲ ನೋಟ

ಮಾನವ ಜನಾಂಗದ ಸಭ್ಯತೆಯು ಬೆಳೆಯುತ್ತಿದ್ದಂತೆ ಬಾಲಕಾರ್ಮಿಕ ಪದ್ಧತಿಯಂತಹ ಮಕ್ಕಳು ಶೋಷಣೆಗೆ ಒಳಗಾಗುವ ಅನಿಷ್ಟ ಪದ್ಧತಿಯೂ ಚಾರಿತ್ರಿಕ ಸಂದರ್ಭದಲ್ಲಿ ಬೆಳೆಯುತ್ತಾ ಆಧುನಿಕ ಸಾಮಾಜಿಕ ಜೀವನದಲ್ಲಿ ಉಲ್ಬಣಗೊಳ್ಳುತ್ತಿರುವುದನ್ನು ಬಹುತೇಕ ಎಲ್ಲ ರಾಷ್ಟ್ರಗಳೂ ಬಹಳ ಗಂಭೀರವಾಗಿ ಪರಿಗಣಿಸಿವೆ, ಹಾಗೆ ಅದರ ನಿರ್ಮೂಲನೆಗಾಗಿ ಕಾನೂನು ವ್ಯವಸ್ಥೆಯನ್ನು ಬಿಗಿಗೊಳಿಸುತ್ತಾ ನಡೆದಿವೆ. ಜನರಲ್ಲಿ ಈ ಅನಿಷ್ಠ ಪದ್ಧತಿಯಿಂದ ಸಮಾಜದ ಮೇಲಾಗುವ ದುಷ್ಪರಿಣಾಮದ ಬಗ್ಗೆ ಅರಿವು ಮೂಡಿಸಿ ಈ ಪದ್ಧತಿಯ ನಿರ್ಮೂಲನೆಗಾಗಿ ಶೈಕ್ಷಣಿಕವಾಗಿಯೂ ಹಾಗೂ ಹಲವು ಪ್ರದರ್ಶಕ ಕಲೆಗಳ ಬಳಕೆಯ ಮೂಲಕ ಪ್ರಯತ್ನಿಸುವ ಅಭಿಯಾನ ಕಾರ್ಯಕ್ರಮಗಳನ್ನು ಆಯಾ ರಾಷ್ಟ್ರದವರು ಹಮ್ಮಿಕೊಳ್ಳುತ್ತಾ ಬಂದಿವೆ.

ಭಾರತೀಯ ಸಂದರ್ಭದಲ್ಲಿ, ನಾಟಕ, ಬೀದಿನಾಟಕ, ಡಾಕ್ಯುಮೆಂಟ್ರಿ, ಚಲನಚಿತ್ರ ಇತ್ಯಾದಿ ಪ್ರದರ್ಶಕ ಕಲಾ ಮಾಧ್ಯಮಗಳು ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆ ಕುರಿತು ಜನಜಾಗೃತಿ ಮೂಡಿಸಲು ಬಳಕೆಯಾದಷ್ಟು ಗೊಂಬೆಯಾಟದಂತಹ ಪ್ರಬಲ ಮಾಧ್ಯಮವು ಅಷ್ಟಾಗಿ ಬಳಕೆ ಆಗದಿದ್ದದ್ದು ನಮಗೆ ಕಂಡು ಬರುತ್ತದೆ. ಬಳಕೆಯಾಗಿದ್ದರೂ ಅದು ಕೇವಲ ಔಪಚಾರಿಕವಾಗಿದ್ದು, ಹಾಗೆ ಆ ಮಾಧ್ಯಮದ ಬಳಕೆ ಕುರಿತು ವ್ಯವಸ್ಥಿತ ದಾಖಲೆಯೂ ಆಗಿಲ್ಲವೆಂದು ಹೇಳಬಹುದು. NGOಗಳು ಸಾಮಾಜಿಕ ಅರಿವು ಮೂಡಿಸಲು ಗೊಂಬೆ ಆಟದಂತಹ ಮಾಧ್ಯಮವನ್ನು ಕೆಲಸಾರಿ ಬಳಸಿದರೂ ಅವರ ಪ್ರದರ್ಶನಗಳ ಪ್ರಸ್ತುತಿಯಲ್ಲಿ ಆ ಮಾಧ್ಯಮದ ತಾಂತ್ರಿಕ ಹಾಗೂ ಸೈದ್ಧಾಂತಿಕ ಸತ್ವವನ್ನು ಸಮರ್ಥವಾಗಿ ದುಡಿಸಿಕೊಳ್ಳಲು ಆಗದಿದ್ದುದು ಕಂಡು ಬರುತ್ತದೆ. ಇದಕ್ಕೆ ವ್ಯವಸ್ಥಿತ ಕೈಪಿಡಿಯೂ ಇಲ್ಲದಿರುವುದೂ ಒಂದು ಕೊರತೆಯೆಂದು ಹೇಳಬಹುದು. ಎಷ್ಟೋ ಆಸಕ್ತ ಸಂಘ–ಸಂಸ್ಥೆಗಳೂ, ಸಾಮಾಜಿಕ ಕಾರ್ಯಕರ್ತರೂ, ಯುವಕರೂ, ಶಿಕ್ಷಕರೂ ಹಾಗೂ ಮಕ್ಕಳೂ ಗೊಂಬೆ ಆಟದಂತಹ ಮಾಧ್ಯಮವನ್ನು ತಮ್ಮ ಸಾಮಾಜಿಕ ಅರಿವು ಮೂಡಿಸುವ ಕಾರ್ಯಕ್ರಮಗಳಲ್ಲಿ ಬಹಳ ಜಾಳು ಜಾಳಾಗಿ ಬಳಸುತ್ತಿರುವುದು ನಮಗೆ ತತಕ್ಷಣದ ಸಮೀಕ್ಷೆಯಿಂದ ಕಂಡು ಬಂದಿದೆ. ಆಯಾ ವಿಷಯಗಳಿಗೆ ಸಂಬಂಧಪಟ್ಟ ಗೊಂಬೆ ಆಟಗಳ ಪಠ್ಯ ರಚನೆ, ಗೊಂಬೆಗಳ ತಯಾರಿಕೆಯ ರೀತಿ, ಆಡಿಸುವ ರೀತಿ ಮತ್ತು ಸಂಪನ್ಮೂಲಗಳ ಸ್ಥೂಲ ಮಾಹಿತಿ ಇಲ್ಲದಿರುವುದೂ ಇವೆಲ್ಲಾ ಕೊರತೆ ಎಂದೇ ಹೇಳಬಹುದು.

ಪ್ರದರ್ಶಕ ಕಲೆಗಳಲ್ಲಿ ಬೀದಿ ನಾಟಕ ಮಾಧ್ಯಮವು; ಸಾಕ್ಷರತೆ, ಏಡ್ಸ್ ನಿರ್ಮೂಲನೆ, ನೈರ್ಮಲ್ಯ ಕುರಿತು ಜಾಗೃತಿ ಹಾಗೂ ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆ ಹೀಗೆ ಮುಂತಾದ ಸಾಮಾಜಿಕ, ಶೈಕ್ಷಣಿಕ ಕಾರ್ಯಕ್ರಮಗಳನ್ನು ಕುರಿತು ಜನಜಾಗೃತಿ ಮೂಡಿಸಲು ನಿರಂತರವಾಗಿ ಬಳಕೆಯಾಗುತ್ತಿದೆ. ಗೊಂಬೆ ಆಟವನ್ನು ಹಾಗೆ ಬಳಸಿ ಮೇಲೆ ಕಾಣಿಸಿದ ಕಾರ್ಯಕ್ರಮಗಳ ಅಭಿಯಾನವನ್ನು ಇನ್ನೂ ತೀವ್ರಗೊಳಿಸಲು ಸಾಧ್ಯವಿದೆ ಎಂದು ಪ್ರಸ್ತುತ ಕೈಪಿಡಿಯು ಅಭಿಪ್ರಾಯಪಡುತ್ತದೆ. ಕಾರಣ ಬೀದಿನಾಟಕ ಹೆಚ್ಚಾಗಿ ತೆರೆದ ರಂಗಸ್ಥಳದಲ್ಲಿ ಪ್ರಸ್ತುತಗೊಳ್ಳುತ್ತಲಿದ್ದು ಪ್ರದರ್ಶನದ ಉದ್ದೇಶ ಎಷ್ಟೇ ನಿಖರವಾಗಿದ್ದರೂ ಅದು, ಸಹಜವಾಗೆ, ತೆರೆದ ರಂಗಸ್ಥಳದಲ್ಲಿ ಹರಡಿಬಿಡುತ್ತದೆ. ಗೊಂಬೆ ಆಟದಲ್ಲಿ ಹಾಗಾಗದೆ ಗೊಂಬೆಗಳು ನೇರವಾಗಿ ತಮ್ಮ ವಿನೂತನ ವಿನ್ಯಾಸ ಪ್ರದರ್ಶನ ಪ್ರಸ್ತುತಿಯಿಂದಾಗಿ ನಿರ್ದಿಷ್ಟ ಪ್ರೇಕ್ಷಕರಲ್ಲಿ ನೇರವಾಗಿ ತನ್ನ ಕಥಾ ವಿಷಯವನ್ನು ಸಂವಹಿಸುತ್ತಿರುತ್ತದೆ. ಒಂದು ರೀತಿ ಗೊಂಬೆ ಆಟ ಆಪ್ತ ರಂಗಭೂಮಿಯ (Intimate Theatre) ಪ್ರಸ್ತುತಿಯ ಗುಣ ಹೊಂದಿರುತ್ತದೆ. ಹೀಗಾಗಿ ಬಾಲಕಾರ್ಮಿಕ ಪದ್ಧತಿಯ ನಿವಾರಣಾ ವಿಷಯವನ್ನೂ ಸೇರಿದಂತೆ ಎಲ್ಲ ಬಗೆಯ ಸಾಮಾಜಿಕ ಅನಿಷ್ಠಗಳನ್ನು ಕುರಿತ ಅರಿವನ್ನು ಸಾಮಾಜಿಕರಲ್ಲಿ ನೇರವಾಗಿ ಈ ಮಾಧ್ಯಮದ ಮೂಲಕ ಮುಟ್ಟಿಸಬಹುದು.

ಗೊಂಬೆ ಆಟದಲ್ಲಿ ಪ್ರಮುಖವಾಗಿ ಸೂತ್ರದ ಗೊಂಬೆಯಾಟ (String Puppet play or Marionetts), ಸಲಾಕೆ ಗೊಂಬೆಯಾಟ (Rod Puppet play), ತೊಗಲು ಗೊಂಬೆಯಾಟ (Leather Sadow Puppet play) ಹಾಗೂ ಕೈಗವಸು ಗೊಂಬೆಯಾಟ (Glow Puppet Play); ಹೀಗೆ ನಾಲ್ಕು ಪ್ರಕಾರಗಳಿದ್ದು ಪ್ರಸ್ತುತ ಕರ್ನಾಟಕದಲ್ಲಿ ಅವುಗಳ ವಿನ್ಯಾಸ, ಕಥಾವಸ್ತು, ಪ್ರದರ್ಶನ ಕುರಿತು ಸಣ್ಣಮಟ್ಟ ದಾಖಲೆಗಳು ಕಿರುಲೇಖನ ಹಾಗೂ ಕೆಲ ಕಿರುಪುಸ್ತಕಗಳೂ ಇವೆ. ತತಕ್ಷಣ ಹೆಸರಿಸ ಬಹುದಾದರೆ ಎಸ್.ಎ. ಕೃಷ್ಣಯ್ಯ ಇವರ "Karnataka Puppetry", ಭಾಸ್ಕರ ಕಾಮತ್ ಇವರ 'Story of Kogga Kamat's Marionettes' ಇವು ಕರ್ನಾಟಕದ ಗೊಂಬೆಯಾಟ ಕುರಿತಾದ ಇಂಗ್ಲೀಷಿನಲ್ಲಿ ರಚಿತವಾದ ಕಿರು ಪುಸ್ತಕಗಳು. ಹಾಗೆ ಗೋವಿಂದ ರಾಜ ಇವರು ರಚಿಸಿದ 'ಗೊಂಬೆರಾಮರು' ಎಂಬ ಪುಸ್ತಕವೂ ಗೊಂಬೆ ಆಟವನ್ನು ಕುರಿತಾದ ಕನ್ನಡದಲ್ಲಿ ಬರೆದ ಪುಸ್ತಕವಾಗಿದೆ. ಈ ಪುಸ್ತಕಗಳು ಹಾಗೂ ಇನ್ನೂ ಕೆಲವು ಲೇಖನಗಳು ಪಾರಂಪರಿಕ ಗೊಂಬೆ ಆಟಗಳ ಮಾಹಿತಿ ನೀಡುತ್ತವೆ. ಆ ಆಟಗಳ ವೈಖರಿ ಈ ಪುಸ್ತಕಗಳಲ್ಲಿ ದಾಖಲಾಗಿದ್ದು, ಒಂದು ಸ್ಥೂಲ ಚಿತ್ರಣವನ್ನು ಕರ್ನಾಟಕ ಗೊಂಬೆ ಆಟದ ಬಗ್ಗೆ ಈ ಪುಸ್ತಕಗಳು ನೀಡುತ್ತವೆ. ಪ್ರಾಯೋಗಿಕವಾಗಿ ಅನುಸಂಧಾನ ಮಾಡಲು ಹೊರಟ ಗೊಂಬೆ ಆಟದ ಆಸಕ್ತರಿಗೆ ಈ ಪುಸ್ತಕಗಳಿಂದ ಕುರಿತಾದ ಪೂರ್ತಿಯಾಗಿ ಆ ಆಟದ ಪ್ರಯೋಗ ಪದ್ಧತಿ ವಿವರಗಳು ಸಿಗುವುದಿಲ್ಲ ಮತ್ತು ಇವು ಕೈಪಿಡಿ ಸ್ವರೂಪದ್ದೂ ಅಲ್ಲಾ, ಹಾಗೆ ಗೊಂಬೆ ಆಟದ ಆಧುನಿಕ ಸ್ವರೂಪ ಕುರಿತು ಭಾರತದ ಬಹುತೇಕ ಭಾಷೆಗಳಲ್ಲಿ ವಿವರವಾದ ದಾಖಲೆಗಳೂ ಆಗಿಲ್ಲ. ಆದರೆ ಇತ್ತೀಚೆಗೆ ಸಂಗೀತ ನಾಟಕ ಅಕಾಡೆಮಿಯವರು ಆ ನಿಟ್ಟಿನಲ್ಲಿ ಕೆಲಸ ಮಾಡಿದೆ. Natya ಎಂಬ ಪುಸ್ತಕದಲ್ಲಿ (1960–61) Puppet Theatre Around The World" ಎಂಬ ಶೀರ್ಷಿಕೆಯಲ್ಲಿ ಗೊಂಬೆ ಆಟ ಕುರಿತಾದ ಕೆಲ ಲೇಖನಗಳನ್ನು ಪ್ರಕಟಿಸಿತ್ತು. ಈ ಲೇಖನಗಳಲ್ಲಿ ಭಾರತದಲ್ಲಿ ಹಾಗೂ ಪಶ್ಚಿಮ ದೇಶಗಳಲ್ಲಿ ಗೊಂಬೆ ಆಟದಲ್ಲಿ ಹೆಸರಾದ ತಜ್ಞರ ಲೇಖನಗಳಿವೆ. ಎಲ್ಲ ಲೇಖನಗಳೂ ಇಂಗ್ಲೀಷ ಭಾಷೆಯಲ್ಲಿವೆ.

ಒಟ್ಟು ಗೊಂಬೆ ಆಟದ ಸಾಹಿತ್ಯ ಹಾಗೂ ಸಂಪನ್ಮೂಲಗಳನ್ನು ಗಮನಿಸಲಾಗಿ, ಆಧುನಿಕ ಗೊಂಬೆ ಆಟದ ಕಥಾ ರಚನೆ ಕುರಿತಾದ ಸಂಗ್ರಹದ ಪುಸ್ತಕಗಳು ಇಲ್ಲದ್ದು ನಮಗೆ ಕೊರತೆಯಾಗಿ ಕಾಣಿಸುತ್ತದೆ. ಹಾಗೆ ಗೊಂಬೆ ಆಟದ ಸ್ವರೂಪ ಅದರ ಪ್ರದರ್ಶನೀಯ ಸಾಧ್ಯತೆ ಕುರಿತಾದ ಕೈಪಿಡಿ ಮಾದರಿಯ ಪುಸ್ತಕಗಳು ಇಲ್ಲವೆಂಬುದು ನಮಗೆ ತಿಳಿದು ಬರುತ್ತದೆ. ಶಾಲೆಗಳಲ್ಲಿ ಮಕ್ಕಳಿಗೆ ಸಾಮಾಜಿಕ ಅರಿವು ಮೂಡಿಸುವ ಏಷ್ಟೋ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಆದರೆ ಗೊಂಬೆ ಆಟದ ಬಳಕೆ ಮಾಡುವುದು ಕಡಿಮೆ. ಆ ನಿಟ್ಟಿನಲ್ಲಿ ಪ್ರಸ್ತುತ ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆಗಾಗಿ ಗೊಂಬೆ ಆಟದ ಮಾಧ್ಯಮ ಬಳಕೆ ಕುರಿತಾದ ಈ ಕೈಪಿಡಿ ಮಕ್ಕಳೂ ಸೇರಿದಂತೆ ಸ್ವಯಂ ಸೇವಾ ಸಂಸ್ಥೆಗಳಿಗೆ, ಯುವಕರಿಗೆ, ಶಿಕ್ಷಕರಿಗೆ ಉಪಯುಕ್ತವಾಗಬಲ್ಲದು.

ಈ ಕೈಪಿಡಿಯಲ್ಲಿ ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆ ತನ್ಮೂಲಕ ಮಕ್ಕಳ ಶಿಕ್ಷಣ ಕುರಿತು ಬೆಳಕು ಚೆಲ್ಲಬಲ್ಲಂತಹ ನಾಲ್ಕು ಚಿಕ್ಕ ಕಥೆಗಳನ್ನು ಗೊಂಬೆ ಆಟಕ್ಕಾಗಿ ರಚಿಸಲಾಗಿದೆ. ಇವುಗಳಲ್ಲಿ ಎರಡು ತೊಗಲುಗೊಂಬೆ ಆಟಕ್ಕಾಗಿಯೂ ಎರಡು ಸಲಾಕೆ ಮತ್ತು ಕೈಗವಸು ಗೊಂಬೆ ಆಟಗಳ ಮಾಧ್ಯಮಗಳಿಗಾಗಿ ರಚಿಸಲಾಗಿದೆ. ಸಂದರ್ಭಕ್ಕೆ ತಕ್ಕಂತೆ ಅಲ್ಲಲ್ಲಿ ಪ್ರದರ್ಶನ ಹಾಗೂ ರಚನಾ ವಿನ್ಯಾಸವನ್ನು ಸಾಧ್ಯಂತ ವಿವರವಾಗಿ ಕೊಡಲಾಗಿದೆ. ಹಾಗೆ ಒಟ್ಟು ಪ್ರದರ್ಶನವನ್ನು ಸರಳ ರೀತಿಯಲ್ಲಿ ಹೇಗೆ ಪ್ರಸ್ತುತಪಡಿಸಬಹುದು ಎಂಬುದರ ಮಾಹಿತಿ ನೀಡಲಾಗಿದೆ. ಭಾಗ 1ರಲ್ಲಿ ನಾಲ್ಕು ಗೊಂಬೆ ಆಟದ ಕಥೆಗಳ ವಿವರವಿದ್ದು ಭಾಗ 2ರಲ್ಲಿ ಗೊಂಬೆ ಆಟದ ಪ್ರಕಾರಗಳ ಬಗ್ಗೆ, ಅದರ ಸಂವಹನ ಪ್ರಕ್ರಿಯೆ ಕುರಿತಾದ ವಿವರವನ್ನು ಸಾಧ್ಯವಾದಷ್ಟು ಸರಳವಾಗಿ ನೀಡಲು ಪ್ರಯತ್ನಿಸಲಾಗಿದೆ. ಕೊನೆಯ ಭಾಗದಲ್ಲಿಯನ ಅನುಬಂಧದಲ್ಲಿ ಗೊಂಬೆ ಆಟ ಕುರಿತಾದ ಹೆಚ್ಚಿನ ತರಬೇತಿ ಮಾಹಿತಿ ವಿವರ ಪಡೆಯಲು ಆಸಕ್ತರಿಗೆ ಉಪಯುಕ್ತವಾಗಲು ಆ ಮಾಧ್ಯಮದಲ್ಲಿ ಈಗಾಗಲೇ ತೊಡಗಿಸಿಕೊಂಡ ಸಂಘ ಸಂಸ್ಥೆಗಳ ವ್ಯಕ್ತಿಗಳ ಪರಿಚಯವನ್ನು ಸಂಕ್ಷಿಪ್ತವಾಗಿ ಕೊಡಲಾಗಿದೆ. ಇಲ್ಲಿ ಹೊಸದಾಗಿ ರಚಿಸಲ್ಪಟ್ಟ ಗೊಂಬೆ ಆಟದ ಕಥೆಗಳ ಜೊತೆಗೆ ಆ ಕಥೆಗೆ ಬೇಕಾದ ಹೊಸ ಗೊಂಬೆಗಳ ವಿನ್ಯಾಸವನ್ನು ಹೊಸದಾಗಿಯೇ ಮಾಡಿಕೊಳ್ಳಲಾಗಿದೆ. ಕಥೆಯಲ್ಲಿ ಪೂರಕವಾಗಿ ಕೊಟ್ಟ ಆ ಗೊಂಬೆಗಳ ಚಿತ್ರಗಳು ಆ ಕಥೆಯನ್ನು ವಿಜುವಲಾಯಿಜೇಶನ್ ಮಾಡಿಕೊಳ್ಳಲು ಉಪಯುಕ್ತವಾಗಬಲ್ಲದು. ಹೀಗೆ ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆಯಲ್ಲಿ ಗೊಂಬೆಯಾಟ ಬಳಕೆ ಮಾಡಲು ಆಸಕ್ತರಾದವರಿಗೆ ಹಲವಾರು ಮಾಹಿತಿಗಳನ್ನು ಒಳಗೊಂಡ ಪ್ರಸ್ತುತ ಕೈಪಿಡಿ ಒಂದು ಮಹತ್ವದ ಹೆಜ್ಜೆಯಾಗಬಹುದು. ಹಾಗೆ ಈ ಗೊಂಬೆ ನಾಟಕಗಳನ್ನು ನಿರ್ದೇಶಕರು ತಮಗೆ ಅನುಕೂಲವಾದ ರೀತಿಯಲ್ಲಿ ಇಲ್ಲಿಯ ವಿವರಗಳ ಸಹಾಯದಿಂದ ಹೊಸದಾಗಿ ತಮಗೆ ಬೇಕಾದ ರೀತಿಯಲ್ಲಿ ಗೊಂಬೆಗಳನ್ನು ವಿನ್ಯಾಸ ಮಾಡಿಕೊಂಡು ಪ್ರದರ್ಶನಗಳನ್ನು ಸಿದ್ಧಪಡಿಸಲು ಅವಕಾಶವಿದೆ.

# ಭಾಗ 1














ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆ ಕುರಿತ ಗೊಂಬೆ ಆಟಗಳು

## 1.1 ಗೊಂಬೆ ಗಣೇಶನ ನ್ಯಾಯ

## (Judgement of Gombe Ganesha)

### ತೊಗಲು ಗೊಂಬೆ ಅಥವಾ ನೆರಳು ಗೊಂಬೆಯಾಟ

### (Leather or shadow Puppetry)



| | |
|---|---|
| ನಾಟಕ ರಚನೆ | : ಡಾ. ಪ್ರಕಾಶ ಗರೂಡ |
| ಗೊಂಬೆಗಳ ರಚನೆ | : ಕವಿತಾ ಹೆಗಡೆ, ರಜನಿ ಗರೂಡ |
| ಸಂಗೀತ | : ನಾಗರಾಜ ಹೆಗಡೆ |
| ಅವಧಿ | : 25 ನಿಮಿಷ |

## ಪಾತ್ರ ಪರಿಚಯ



೧. ಕಿಳ್ಳಿಕೇತ – ಸಾಂಪ್ರದಾಯಿಕ ತೊಗಲು ಗೊಂಬೆ ಆಟದ ವಿದೂಷಕ ಪಾತ್ರ; ಗೊಂಬೆಯ ಅಳತೆ ಸುಮಾರು 1.5 ಯಿಂದ 2 ಅಡಿ, (ಕೈಗೆ ಚಲನೆ ಕೊಡಬಹುದು).



೨. ಬಾಲಕ ಗಣೇಶ – ಇದೂ ಸಾಂಪ್ರದಾಯಿಕವಾಗಿದ್ದು, ಒಂದು ಕೈಯಲ್ಲಿ ಲೆಕ್ಕಣಿಕೆ ಪುಸ್ತಕ ಇದ್ದರೆ ಒಳ್ಳೆಯದು. ಅಳತೆ 1 1/2 ಅಡಿ ಇಡಿಯಾದ ಗೊಂಬೆ.



೩. ನಾಗರಾಜ ಶೆಟ್ಟಿ – 50-55 ವಯಸ್ಸಿನ ಗೊಂಬೆ. ಶ್ರೀಮಂತ ಕಳೆ, ಕೊರಳಲ್ಲಿ ಹಾರ. ತಲೆಗೆ ಪೇಟ. ಫುಲ್ ತೋಳಿನ ಸಫಾರಿ ಅಥವಾ ಬಿಳಿ ಧೋತರದ ಮೇಲೆ ಕರೀಕೋಟು, ಹೊಟ್ಟೆಡುಮ್ಮ, ಒಂದೇ ಕೈಗೆ ಚಲನೆ, ಇಡೀ ಚಿತ್ರ ತಮಾಷೆಯಾಗಿರಬೇಕು. ಹಾಗೆ ಜಿಪುಣತನದಲಕ್ಷಣ ಇರಬೇಕು. ಪ್ರೊಫೈಲ್ ಕಣ್ಣು ಇದೆ.



೪. ಕಾರಕೂನ – 40-45 ವಯಸ್ಸು, ಆಸೆಬುರುಕುತನದ ಮುಖ. ಬಗಲಲ್ಲಿ ಒಂದು ಪೌಚು, ಕರೀ ಟೊಪ್ಪಿಗೆ, ನಾಜುಕಯ್ಯನ ಕಳೆ, ಉದ್ದ ಶರಟು ಪಾಯಜಾಮು, ಕೈಗೆ ಚಲನೆ ಕೊಡಬಹುದು.



೫. ಜವಾನ – 30-35 ವಯಸ್ಸು, ಖಾಕಿ ಶರಟು ಪ್ಯಾಂಟು ಇಡಿಯಾದ ಗೊಂಬೆ.



೬. ಮೇಸ್ತ್ರಿ ಶರಣಪ್ಪ – 40-45 ವಯಸ್ಸು, ಧೋತರ, ಟೊಪ್ಪಿಗೆ, ಬನಿಯನ್ ಮಾದರಿ ಅಂಗಿ ಒಂದು ಕೈಗೆ ಚಲನೆ ಕೊಡಬಹುದು.



೭. ಶಾರದಾ – ಶರಣಪ್ಪನ ಮಗಳು, ವಯಸ್ಸು: 10-12 ಮುಗ್ಧವಾದ ಮುಖ, ಲಂಗ ಬ್ಲೌಸ್.



೮. ಮಾದೇವಿ–30–35 ವಯಸ್ಸು, ಶರಣಪ್ಪನ ಹೆಂಡತಿ, ಹಳ್ಳಿಯ ಸೀರೆ ಇಡಿಯಾದ

9. ಬಡಕೂಲಿಕಾರರ ವಿವಿಧ ಭಂಗಿಯ ಚಿತ್ರ, ಅದರಲ್ಲಿ ತುದಿಗೆ ಇರುವ ಒಂದು ಗೊಂಬೆಗೆ ಕೈಚಲನೆ ಕೊಡಬಹುದು. ಇದರ ಜೊತೆ ಒಂದು ಹೆಣ್ಣು ಒಂದು ಗಂಡು ಹೀಗೆ ಇನ್ನೆರಡು ಗೊಂಬೆಗಳನ್ನು ಬಿಡಿಯಾಗಿ ಸಿದ್ಧಪಡಿಸಿಕೊಳ್ಳಬಹುದು. ಈ ಗುಂಪು ಗೊಂಬೆಗಳನ್ನು ದಪ್ಪವಾದ ಬಟ್ಟೆಯ ಮೇಲೆ ಔಟಲೈನ್ ತೋರಿಸಿ ಚಿತ್ರ ಬಿಡಿಸಬಹುದು. ಈ ಚಿತ್ರಗಳನ್ನು ನಿರ್ದೇಶಕರು ತಮಗೆ ಅನುಕೂಲಕ್ಕೆ ತಕ್ಕಂತೆ ಆಯಾ ಸಂದರ್ಭಕ್ಕೆ ಅನುಗುಣವಾಗಿ ಬಿಡಿಸಿ ಬಳಸಿಕೊಳ್ಳಬಹುದು.

## ಹಿನ್ನೆಲೆ ರಂಗ ಸಜ್ಜಿಕೆ





೧. Sky Scraper ಬಿಲ್ಡಿಂಗ್ ಚಿತ್ರ
೨. ಒಂದು ಗುಡಿಸಲು ಅದರ ಪಕ್ಕದಲ್ಲಿ ಒಂದು ಮರ.
೩. ಇಟ್ಟಿಗೆ ಗುಂಪಿನ ಚಿತ್ರ.
೪. ಇಟ್ಟಿಗೆ ಹೊತ್ತುಕೊಂಡು ಹೋಗುತ್ತಿರುವ ಮಕ್ಕಳ ಚಿತ್ರ

ಈ ಚಿತ್ರಗಳನ್ನು ಕಾರ್ಡ್‌ಬೋರ್ಡ್‌ಗೆ ಹಚ್ಚಿದ ಬಟ್ಟೆ ಅಥವಾ ಕ್ಯಾನವಾಸ್ ಮೇಲೆ ಬಿಡಿಸಬಹುದು.

## ಗೊಂಬೆ ಆಟದ ಪ್ರಯೋಗ

1. ಇಡೀ ಆಟದ ಸಂಭಾಷಣೆಯನ್ನು ಹಿನ್ನೆಲೆ ಸಂಗೀತದೊಂದಿಗೆ ಮೊದಲೇ ರಿಕಾರ್ಡ್ ಮಾಡಿಕೊಂಡು ಸಿಡಿ ಅಥವಾ Cassette ಹಾಕಿ ಆಟ ಆಡುವುದಿದ್ದರೆ 2 ಜನ ತಾಂತ್ರಿಕ ವರ್ಗ, ಹಾಗೂ 5 ಜನ ಗೊಂಬೆ ಆಡಿಸುವವರು ಒಟ್ಟು 7 ಜನ ಸಾಕು. ಜನ ಹೆಚ್ಚಿಗೆ ಇದ್ದರೂ ನಡೆಯುತ್ತದೆ. ಹಾಡುಗಾರರಿದ್ದರೆ ಮೇಳವನ್ನು ಬಳಸಬಹುದು. ಇನ್ನು ಮಕ್ಕಳೇ ಆಟ ಆಡುವುದಾದರೆ ಗೊಂಬೆ ಕುಣಿಸುವವರು, ಮಾತು ಹೇಳುವವರು ಹಾಗೆ ಮೇಳಗೀತದವರ ಜೊತೆಗೆ 2 ಜನ ತಾಂತ್ರಿಕ ವರ್ಗದವರು ಬೇಕು. ಹೀಗೆ ಒಟ್ಟು 4+4+4+2=14 ಜನರ ಒಂದು ಟೀಮು+live Music ಇದ್ದರೆ 2 ಜನ ಸಂಗೀತ ಕಲಾವಿದರು ಹೀಗೆ ಒಟ್ಟು 16 ಜನ ಆಟಕ್ಕೆ ಬೇಕು. ಈ ಸಂಖ್ಯೆಯನ್ನು ಅನುಕೂಲಕ್ಕೆ ತಕ್ಕಂತೆ ಹೆಚ್ಚು ಕಡಿಮೆ ಮಾಡಿಕೊಳ್ಳಬಹುದು.

2. ಬೆಳಗಿನ ಹೊತ್ತು ಯಾವುದಾದರೂ ಶಾಲೆಯ Audotorium ಅಥವಾ classroomನಲ್ಲಿ ಗೊಂಬೆ ಆಟ ಆಡುತ್ತಿದ್ದರೆ ಮೊದಲು ಆ ಜಾಗವನ್ನು ಕತ್ತಲು ಮಾಡಿಕೊಳ್ಳಬೇಕು. 1 ಅಥವಾ 2, 60volt ಬಲಬಿನ ಬೆಳಕಿನ ವ್ಯವಸ್ಥೆ ಮಾಡಿಕೊಳ್ಳಬೇಕು. 10x10 ಅಡಿ ಉದ್ದಗಲ ವೇದಿಕೆ ಸಾಕು. ವೇದಿಕೆ ಸ್ವಲ್ಪ ಎತ್ತರದಲ್ಲಿದ್ದರೆ ಒಳ್ಳೆಯದು. ಆದಷ್ಟು ನೆಲದ ಮೇಲೆ ಒಂದು ಜಮುಖಾನ ಹಾಸಿ ಪ್ರೇಕ್ಷಕರು ಕುಳಿತುಕೊಳ್ಳೊ ವ್ಯವಸ್ಥೆ ಮಾಡಿಕೊಳ್ಳಬೇಕು. ಮತ್ತು ಗೊಂಬೆ ಆಟದ ರಂಗಸ್ಥಳದಿಂದ ಸುಮಾರು 5 ಅಡಿ ದೂರದಿಂದ ಪ್ರೇಕ್ಷಕರು ಕುಳಿತುಕೊಳ್ಳಬೇಕು. ಅಂದರೆ lightನ ರಿಸೋರ್ಸ್ ಕಣ್ಣಿಗೆ ರಾಚುವುದಿಲ್ಲ. ಮಕ್ಕಳ ಅಥವಾ ಪ್ರೇಕ್ಷಕರ ಸಂಖ್ಯೆ 100ಕ್ಕೂ ಹೆಚ್ಚಾಗಿದ್ದರೆ ಎರಡು ಪ್ರದರ್ಶನ ಕೊಡಬೇಕು. ಹೆಚ್ಚಿಗೆ ಪ್ರೇಕ್ಷಕರಿದ್ದರೆ ಗೊಂಬೆಗಳು ದೂರದಿಂದ ಕಾಣುವುದಿಲ್ಲ.

3. ಇಡೀ ಪ್ರಯೋಗ live ಆಗಿದ್ದರೆ, ಧ್ವನಿವರ್ಧಕಗಳನ್ನು ಬಳಸಬೇಕಾಗುತ್ತದೆ. ಕ್ಲಾಸ್ ರೂಮಿನಲ್ಲಾದರೆ ಧ್ವನಿವರ್ಧಕದ ಸಹಾಯವಿಲ್ಲದೇ ಪ್ರದರ್ಶನ ಕೊಡಬಹುದು.

4. ಹಳ್ಳಿಗಳಲ್ಲಿ ಯಾವುದಾದರೂ ಗುಡಿ, ಗುಂಡಾರ ಅಥವಾ ಚಾವಡಿ, ಗ್ರಾಮಪಂಚಾಯತಿಯ Office ಅಥವಾ ಇನ್ನಾವುದಾದರೂ ಕಮ್ಯುನಿಟಿ ಹಾಲ್‌ಗಳಿದ್ದರೆ ಅಲ್ಲಿ ಪ್ರದರ್ಶನ ಕೊಡಬಹುದು.

5. ಗುಡಿಯ ಮುಂದಿನ ಭಾಗದಲ್ಲಿ ಎರಡು ಕಂಬಗಳನ್ನು ಹೂತು ಬಿಗಿಯಾಗಿ 6x6 ಅಡಿ ಉದ್ದಗಲದ ಬಿಳಿಪರದೆ ಕಟ್ಟಿ 2.5 ಅಡಿ ನೆಲದಿಂದ ಅಂತರದಲ್ಲಿ ಗೊಂಬೆಗಳಿಗಾಗಿ ಒಂದು Landing Rope ಕಟ್ಟಿ, ಮೂರು ಬದಿಯನ್ನು ಗುಡಾರ ಅಥವಾ ಕಪ್ಪು ಬಟ್ಟೆಯಿಂದ ಮುಚ್ಚಿ ರಂಗಸಜ್ಜಿಕೆ ಸಿದ್ಧಪಡಿಸಿಕೊಳ್ಳಬಹುದು. ಶಾಲೆಗಳ ಒಳಾಂಗಣದಲ್ಲಿ ಕಂಬಗಳನ್ನು ಹೂಳುವ ಅನುಕೂಲ ಇಲ್ಲದಿದ್ದರೆ ಸಿದ್ಧ ಮಾದರಿಯ ಗೊಂಬೆಯ ಮನೆ ತಯಾರಿ ಮಾಡಿಕೊಳ್ಳಬಹುದು. ಮುಂದಿನ ಪುಟದಲ್ಲಿ ಚಿತ್ರ ನೋಡಿ.

## ಗೊಂಬೆ ಮನೆಯ ತಯಾರಿಕೆಗೆ ಬೇಕಾಗುವ ಸಾಮಗ್ರಿಗಳು

- 8 ಅಡಿಯ 8 Angular
- 6 ಅಡಿಯ 6 Angular
- 4 ಅಡಿಯ 6 Angular
- 5 ಅಡಿಯ Standing Cross Angular

ನಟ್ಟು ಬೋಲ್ಟು, ಬಿಳಿ ಸ್ಕ್ರೀನ್, 8 ಅಡಿಯ ಹಾಫ್ ಇಂಚಿನ ಪೈಪು ಎರಡು, ಕರಿ ಪರದೆ, ಲ್ಯಾಂಡಿಂಗ್ ರೋಪ್. ಚಿತ್ರದಲ್ಲಿ ತೋರಿಸಿರುವಂತೆ Angularಗಳ ಸಹಾಯದಿಂದ ಗೊಂಬೆ ಮನೆ ಹಂದರ ತಯಾರು ಮಾಡಿಕೊಳ್ಳಬೇಕು.




ಆಧುನಿಕ ತೊಗಲುಗೊಂಬೆಯಾಟದ ರಂಗಸಜ್ಜಿಕೆ

## ಸಂಗೀತ ಹಾಗೂ ಹಾಡುಗಳ ಬಳಕೆ

- ಪಠ್ಯದಲ್ಲಿ ಬರುವ ಹಾಡುಗಳಿಗೆ ಶಿಕ್ಷಕರು ತಮಗೆ ಪರಿಚಿತವಿರುವ ಯಾವುದಾದರೂ Tune ಹಾಕಬಹುದು. ಅಥವಾ ಸಿದ್ಧ ಮಾಡಿದ Cassette ಬಳಸಬಹುದು.
- ಶಾಲೆಯಲ್ಲಿ ದೊರೆಯುವ ಚರ್ಮವಾದ್ಯ ಹಾಗೂ ಸಣ್ಣ ವಾದ್ಯಗಳನ್ನು, ಅಲ್ಲಲ್ಲಿ Effectಗಾಗಿ ಬಳಸಬಹುದು. ಕಿಳ್ಳಿಕ್ಯಾತ ಪಾತ್ರದ ಪ್ರವೇಶ ನಿರ್ಗಮನಕ್ಕೆ ಒಂದು ವಾದ್ಯ ಮಾದರಿ ಬಳಸಿದರೆ ಗಣಪತಿ ಪಾತ್ರಕ್ಕೆ ಇನ್ನೊಂದು ಬೇರೆ ಮಾದರಿ ವಾದ್ಯ ಬಳಸಬಹುದು. ಪ್ರತಿ ದೃಶ್ಯದ ಆರಂಭ ಹಾಗೂ ಅಂತ್ಯಕ್ಕೆ ಮೂಡಿಗೆ ತಕ್ಕಂತೆ ವಾದ್ಯಗಳನ್ನು ಬಳಸಿ effect ಕೊಡಬೇಕು. ಅಂದರೆ ಕಥೆಯ ಸಾರಾಂಶ, ಮೂಡ್ ಪ್ರೇಕ್ಷಕರ ಮನಸ್ಸಿನಲ್ಲಿ regist ಆಗುತ್ತದೆ.
- ಹಾಡಿಗೆ ಒಂದೇ ವ್ಯಕ್ತಿ ಹಾಡುವುದಕ್ಕಿಂತ ಮೇಳಗಾನ ಬಳಸಬಹುದು. ಅಂದರೆ ಥೀಮ್ effect ಚೆನ್ನಾಗಿ ಬರುತ್ತದೆ. ಅನುಕೂಲವಾದರೆ ಸಿಂಥಸೈಜರ್, ಹಾರ್ಮೋನಿಯಂ ಇತ್ಯಾದಿ ವಾದ್ಯಗಳನ್ನೂ ಬಳಸಬಹುದು.
- ಪಾತ್ರಗಳ ಮಾತು ನಡೆದಾಗ ಮಾತಿನಲ್ಲಿ ಸ್ವಾರಸ್ಯ miss ಆಗುವುದರಿಂದ ಅನವಶ್ಯಕವಾಗಿ ಸಂಗೀತದ ಹಿನ್ನೆಲೆ ಅಬ್ಬರವಾಗಿ ಕೊಡಬಾರದು.
- ಮಾತು, ಸಂಗೀತ, ಹಾಡು ಹೀಗೆ ಇಡೀ ಪಠ್ಯವನ್ನೇ ಪೂರ್ವಭಾವಿಯಾಗಿ ರಿಕಾರ್ಡ ಮಾಡಿಕೊಂಡು ಪಠ್ಯವನ್ನು audio play ಮಾಡಿ, ಕೇವಲ ಗೊಂಬೆಗಳ ಚಲನೆ ಮಾಡಿ ಆಟವನ್ನು ಕಟ್ಟಬಹುದು. ಪೂರ್ವಭಾವಿ ರಿಕಾರ್ಡಿಂಗ್‌ಗೆ ಹೆಚ್ಚಿನ ಖರ್ಚು ಇರುತ್ತದೆ. ರಿಕಾರ್ಡ್ ಮಾಡಿದ ಪಠ್ಯ ಹಾಗೂ ಗೊಂಬೆ ಕುಣಿತಕ್ಕೆ ಗೊಂಬೆ ಆಟಗಾರ ಚಲನೆಯನ್ನು Synchronize ಮಾಡಿಕೊಳ್ಳಬೇಕು ಇಲ್ಲದಿದ್ದರೆ ಆಟ ಅಭಾಸವಾಗುತ್ತದೆ.

(ಹೆಚ್ಚಿನ ಮಾಹಿತಿಗಾಗಿ ಭಾಗ 2ರಲ್ಲಿಯ ತೊಗಲು ಗೊಂಬೆ ಆಟ ಈ ಅಧ್ಯಾಯ ನೋಡಿ.)

ದೃಶ್ಯ 1



(ಚೌಕಾಕಾರದ ಬಿಳಿ ಪಾರದರ್ಶಕ ಪರದೆಯ ಮೇಲೆ ನಿಧಾನವಾಗಿ ಬೆಳಕು ವರ್ಧಿಸುತ್ತಿದ್ದಂತೆ ತಾಳ, ತಮ್ಮಟೆಗಳ ಲಯದೊಂದಿಗೆ ತೊಗಲು ಗೊಂಬೆ ಆಟದ ಸಾಂಪ್ರದಾಯಿಕ ಸಿದ್ಧ ಪಾತ್ರಧಾರಿ 'ಕಿಳ್ಳಿಕೇತ' ತತ್, ತೈತತ್ ತೈ ಕುಣಿಯುತ್ತ ಕಾಣಿಸಿ ಕೊಳ್ಳುತ್ತಾನೆ. ಆತನ ನೃತ್ಯ ತಾರಕಕ್ಕೆ ಏರುತ್ತಿದ್ದಂತೆ 'ಬಾಲಗಣಪತಿ'ಯ ಗೊಂಬೆ ತೋಂ ತೋಂ ಎಂದು ಕುಣಿಯುತ್ತ ಕಾಣಿಸಿಕೊಳ್ಳುತ್ತದೆ. ಬಾಲಗಣಪತಿ ಕೈಯಲ್ಲಿ ಲೆಕ್ಕಣಿಕೆ ಹಾಗೂ ಪುಸ್ತಕ ಇದೆ. ಆ ಗೊಂಬೆಯೂ ಸಹಿತ ಲಯಕ್ಕೆ ಕುಣಿಯುತ್ತಾ ಪ್ರವೇಶಿಸುತ್ತದೆ.)

**ಗಣಪತಿ :** (ಕಿಳ್ಳಿಕ್ಯಾತ ಗೊಂಬೆಯನ್ನು ಉದ್ದೇಶಿಸಿ) Stop it, stop it, ಏ ಮಿಸ್ಟರ್ . . . . ನಿಲ್ಲಿಸು ನಿನ್ನ ಈ ನರ್ತನ ಇಲ್ಲಿ ನೆರೆದಂತಹ ಪ್ರೇಕ್ಷಕರೆದುರು ನಿನ್ನ ದುರ್ವರ್ತನ.

**ಕಿಳ್ಳಿಕ್ಯಾತ :** ಯಾರಪ್ಪಾ ನೀನು? ಅಟ್ಟ ಮೇಲೆ ಬಂದು ಘಟ್ಟಿಸಿ ನನ್ನನ್ನು ಮಾತಾಡಸಾಂವ ನೀನು ಯಾರು? ಹೇಳು ನಿನ್ನ ಹೆಸರು ತೊಗೊಂಡು ಒಂದೆ ಉಸಿರು.

**ಗಣಪತಿ :** ಭಲೆ . . . ಭಲೆ . . . ಏನು ಉದ್ಧಟತನ . . . . Stupid ಅಲ್ಲಯ್ಯ ಮಹಾಶಯ ನೀನು ಮಾಡ್ತಾ ಇರೋದೇನು?

**ಕಿಳ್ಳಿಕ್ಯಾತ :** ನಾಟಕ

**ಗಣಪತಿ :** ಎಂಥಾ ನಾಟಕ

**ಕಿಳ್ಳಿಕ್ಯಾತ :** ಗೊಂಬೆ ನಾಟಕ

**ಗಣಪತಿ :** ಅಲ್ಲಯ್ಯ ಮಹಾಶಯ ಆಟ-ನಾಟಕಕ್ಕೆ ಪ್ರಪ್ರಥಮವಾಗಿ ಸಾಂಪ್ರದಾಯಿಕವಾಗಿ ಯಾರ ಪೂಜೆ ಆಗಬೇಕು.

**ಕಿಳ್ಳಿಕ್ಯಾತ :** ಯಾರ ಪೂಜೆ ಆಗಬೇಕು?

**ಗಣಪತಿ :** ಗಣಪತಿ, ಗಜಾನನ, ವಿಘ್ನನಿವಾರಕ ವಿಘ್ನೇಶನ ಪೂಜೆ ಆಗಬೇಕೋ ಬ್ಯಾಡವೋ?

**ಕಿಳ್ಳಿಕ್ಯಾತ :** ಹೇ . . . ಹೇ . . . ನಾಟಕ ಅಂದಮೇಲೆ ಆಗಲೇಬೇಕರಿ.

**ಗಣಪತಿ :** ಮತ್ತ ನನ್ನ ಪೂಜೆ ಮಾಡ್ದೆ ನೀನು ಆಟಾ ಹ್ಯಾಂಗ ಶುರು ಮಾಡಿದ್ಯೋ ಅಧಮಾಧಮ.

**ಕಿಳ್ಳಿಕ್ಯಾತ :** ಸ್ವಾಮಿ ನೀವು mistake ಮಾಡಿಕೊಂಡೀರಿ. ತಮ್ಮ ಮಾತಿನಿಂದ ತಾವು ವಿಘ್ನೇಶ, ಗಜಾನನ, ಗಣಪತಿ ಅಂತ ತಿಳೀತು. ಆದ್ರ ತಮ್ಮ ಪೂಜೆ ಜೀವಂತ ಜನರಿಂದಾಡುವ ನಾಟಕದ ಮುನ್ನ ನಡೀಬೇಕು ಉಚಿತ ಪದ್ಧತಿ, ಆದ್ರ ಈ ಗೊಂಬಿ ಆಟದಾಗೂ ನಿಮಗ ಪೂಜೆ ಬೇಕೆಂಬ ಹಟಾ ಯಾಕ್ರಿ ನಿಮಗ?

**ಗಣಪತಿ :** ಜೀವಂತ ಜನರಿಂದಾಗುವ ನಾಟಕ ಇರಲಿ ಗೊಂಬೆಗಳಿಗೆ ಜೀವ ಕೊಡುವ ನಿಮ್ಮಂಥವರು ಆಡುವ ಗೊಂಬೆ ಆಟವೇ ಇರಲಿ, ಆಡುವವರು, ನೋಡುವವರು, ಕೇಳುವವರು ಇದ್ದು, ಇಡೀ ಆಟ ಯಾವ ವಿಘ್ನವೂ ಇಲ್ಲದೇ ಸಾಂಗೋಪಾಂಗ ವಾಗಿ ನೆರವೇರಲು ನಮಗೆ ಸಲ್ಲಬೇಕಾದ ಪೂಜೆ ಸಲ್ಲಲೇಬೇಕು.

**ಕಿಳ್ಳಿಕ್ಯಾತ :** ಇದು ನೋಡ್ರೀ ದೊಡ್ಡವರ ಮಾತು. ಲಂಚ ಇಲ್ಲದ ಯಾವ ಕೆಲಸಾನೂ ಸುಸೂತ್ರ ನಡೆಯೋದಿಲ್ಲ ಅಂದ್ಹಾಂಗಾತು.

**ಗಣಪತಿ :** ಎಲವೋ ಮಾನವಾ ಪೂಜೆ-ಪುನಸ್ಕಾರಗಳು ಲಂಚ ಅಲ್ಲವೋ, ಲಂಚ ಸ್ವೀಕರಿಸುವ ಅನಿಷ್ಠತನವೇನಿದ್ದರೂ ಅದು ಈ ಭೂಲೋಕದ ಅಲ್ಪ ಅಧಿಕಾರಿಗಳಿಗೆ, ಸ್ವಾರ್ಥಿ ರಾಜಕಾರಣಿಗಳಿಗೆ ಮಾತ್ರ. ನಿಮ್ಮ ಪೂಜೆ, ಭಕ್ತಿಯಿಂದ ನಾವು ಪ್ರಸನ್ನರಾಗುತ್ತೇವೆ.

**ಕಿಳ್ಳಿಕೇತ :** ಅದು ಹ್ಯಾಂಗರಿ

**ಗಣಪತಿ :** ನೀವು ಆಟ ಮಾಡುವುದು ಯಾರಿಗಾಗಿ?

**ಕಿಳ್ಳಿಕೇತ :** ಪ್ರೇಕ್ಷಕರಿಗಾಗಿ.

**ಗಣಪತಿ :** ಅಂದ ಮೇಲೆ ಪ್ರೇಕ್ಷಕರ ಪರವಾಗಿ ಸಾಂಕೇತಿಕವಾಗಿ ನಾನಿಲ್ಲಿದ್ದೇನೆ, ಸಮರ್ಪಣಾ ಭಾವದಿಂದ ನೀವು ನನಗೆ ಮಾಡುವ ಪೂಜೆ. ಅದು ಒಂದು ಅರ್ಥದಲ್ಲಿ ಪ್ರೇಕ್ಷಕರಿಗೇ ಸಲ್ಲುತ್ತದೆ. ಅಂದಾಗ....... ನಿಮ್ಮ ಕಾರ್ಯಗಳು ಯಾವ ಅಡೆತಡೆಗಳಿಲ್ಲದೇ ಸಿದ್ಧಿಸುತ್ತವೆ. ತಡಮಾಡದೆ ಪೂಜೆ ಸಲ್ಲಿಸು. ತಿಳಿತೇನೋ ಮಾನವಾ ನೀನಾಗಬೇಡ ದಾನವ.

**ಕಿಳ್ಳಿಕ್ಯಾತ :** ಆಯಿತು ಸ್ವಾಮಿ ನೀವು ಇಷ್ಟು ಭರವಸೆ ನೀಡ್ತೀರಿ ಅಂದ ಮೇಲೆ ಈ ಗೊಂಬೆ ಆಟಕ್ಕೆ ಮುನ್ನ ನಿಮಗೆ ಪೂಜೆ ಸಲ್ಲಿಸ್ತೀವಿ, ಆದ್ರೆ ನೀವು ನಮ್ಮ ಹೊಸ ಗೊಂಬೆ ಆಟ ನೋಡಿ ಆಶೀರ್ವದಿಸಬೇಕು.

**ಗಣಪತಿ :** ಹಾಗೇ ಆಗಲಿ, ಅಂದ ಹಾಗೆ ನಿನ್ನ ಹೊಸ ಆಟದ ಹೆಸರೇನು?

**ಕಿಳ್ಳಿಕ್ಯಾತ :** 'ಗೊಂಬೆ ಗಣೇಶನ ನ್ಯಾಯ' ಅಚಿತ.

ಗಣಪತಿ : ಅಲಿ ಇವನ ನನ್ನ ಗೊಂಬೆ ಮಾಡಿ ನನ್ನಿಂದ ಅದೆಂಥಾ ನ್ಯಾಯ ಕೊಡುಸ್ತಿಯಪಾ

ಕಿಳ್ಳಿಕ್ಯಾತ : ನಮ್ಮ ಆಟದ ಮೋಜೆಂದರೆ ಅದು. ನೋಡಿ ಸ್ವಾಮಿ ನಟ-ಪಾತ್ರ ಆಗೋದು, ಆಟದ ನೋಟಕ ಆಗೋದು, ನೋಟಕ ಅದವ ಮತ್ತೆ ಪಾತ್ರಧಾರಿ ಆಗೋದು. ಅದೇ ನಮ್ಮ ಆಟದ ಗಮ್ಮತ್ತು.

ಗಣಪತಿ : ಆಯಿತಪ್ಪಾ ಆಯಿತು. ನಿನ್ನ ಈ ಗಮ್ಮತ್ತಿನ ಗೊಂಬೆಯ ಆಟದ ಕಥಾ ಹಂದರ ಯಾವ ವಿಷಯವನ್ನು ಕುರಿತದ್ದಾಗಿದೆ.

ಕಿಳ್ಳಿಕ್ಯಾತ : 'ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆ' ವಿಷಯ ಕುರಿತಾಗಿದೆ.

ಗಣಪತಿ : 'ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆ' ಅಲ್ಲಯ್ಯಾ ಇದ್ಯಾವುದಯ್ಯಾ ಹೊಸ ಕಥೆ, ಕೇಳಿದ್ರೇನೆ ಆಗ್ತದಲ್ಲಾ ವ್ಯಥೆ. ಬಾಲಕರನ್ನು ಕಾರ್ಮಿಕರನ್ನಾಗಿ ಮಾಡುವುದೇ ಬಹಳ ವಿಚಿತ್ರವಾಗಿದೆ.

ಕಿಳ್ಳಿಕ್ಯಾತ : ಸ್ವಾಮಿ ದೇವಾ ಬಾಲ ವಿಘ್ನೇಶಾ, ನೀನು ಬಾಲಕನಾದರೂ ದೇವತಾ ಪುರುಷ, ಪ್ರೇಕ್ಷಕದೇವೋಭವನಾದ ನೀನಾದ್ರೂ ಈ ಹೊಸಾ ಕಥೆ ಕೇಳಿ ನೋಡಿ ಈ ಅನಿಷ್ಟ ಪದ್ಧತಿ ಆಚರಿಸಿದಂತೆ ನಮ್ಮ ಜನರಿಗೆ ಸದ್ಬುದ್ಧಿಯ ಪಾಲಿಸು. ನೀನೂ ಬಾಲಕ . . . ನಿನ್ನಂತೆ ಈ ಭೂಲೋಕದಲ್ಲಿ ಈ ಬಾಲಕಾರ್ಮಿಕ ಎಂಬ ಅನಿಷ್ಟ ಪದ್ಧತಿಯಲ್ಲಿ ಸಿಕ್ಕು ನರಳುತ್ತಿರುವ ಅಸಂಖ್ಯಾತ ಎಳೆ ಬಾಲ-ಬಾಲಕಿಯರನ್ನು ಪಾರು ಮಾಡಿ ಆಶೀರ್ವದಿಸು.

ಗಣಪತಿ : ನಿನ್ನ ಮಾತಿನ ಒಳಾರ್ಥ ನನಗೆ ತಿಳಿಯುತ್ತಿದೆ. ನನ್ನ ಆಶೀರ್ವಾದ ನಿನ್ನ ಮೇಲೆ ಇದ್ದೇ ಇದೆ, ಆರಂಭಿಸು ನಿನ್ನ ಗೊಂಬೆ ಆಟ, ನಿನ್ನ ಕಥೆಯಲ್ಲಿ ಬರುವ ದುಷ್ಟರಿಗೆ ಶಿಕ್ಷೆ ಖಂಡಿತಾ ಆಗುತ್ತೆ ಚಿಂತಿಸದಿರು.

ಕಿಳ್ಳಿಕ್ಯಾತ : ಹಾಗೆ ಆಗಲಿ ವಿಘ್ನೇಶಾ, ತಾವು ಇಷ್ಟು ಭರವಸೆ ಕೊಟ್ಟ ಮೇಲೆ ಇದೋ ನನ್ನ ಗೊಂಬೆ ಆಟ ಆರಂಭ ಮಾಡ್ತೇನೆ (ಪ್ರಾರಂಭದ ಪೂಜೆಯ ದೃಶ್ಯ ಪರದೆಯ ಮೇಲೆ ಎರಡೂ ಗೊಂಬೆಗಳೂ ಕುಣಿಯುತ್ತವೆ).

## ಹಾಡು

ವಂದನೆ ನಿನಗೆ ವಂದನೆ ಗಜಮುಖನೆ
ಬೆಳಗುವೆ ಆರತಿ ಪ್ರತಿದಿನ ಮಜಮುಖನೆ
ಡೊಳ್ಳುಹೊಟ್ಟೆ ಗಣಪಾ ನಿನಗೆ
ಸುಳ್ಳು ಹೇಳದೇ ಮಾಡುವೆ ನಮನ
ಒಳ್ಳೇ ಬುದ್ಧಿ ನಡೆ-ನುಡಿ ದಯಮಾಡೋ ಹೇ ಬಾಲ ವಿಘ್ನೇಶ
ನಿನಗೆ ನಮೋ ನಮೋ
ನಿನಗೆ ನಮೋ ನಮೋ

ಗಣಪತಿ : ಭಕ್ತಾ ಪ್ರಸನ್ನನಾಗಿದ್ದೇನೆ ಇನ್ನು ಮುಂದಿನ ಕಥೆ ಪ್ರಾರಂಭಿಸು.

ಕಿಳ್ಳಿಕ್ಯಾತ : ಇನ್ನ ಮುಂದಿನ ಕಥೆ ಹ್ಯಾಗೆ ಹೇಳಲಿ?

## ಹಾಡು

ಇನ್ನು ಮುಂದಿನ ಕಥೆ ಹೇಳಬೇಕು ಅಂದ್ರೆ ಆಗ್ತದ ವ್ಯಥೆ
ಎಳೆಯ ಮಕ್ಕಳನ್ನು ಎಳೆ ಎಳೆದು ತಂದಾರು
ಅವರ ದುಡಿಮೆಯಿಂದ ಮಾಡಿಕೊಂಡು ಲಾಭ ತಿಂದಾರೊ.
ಮಕ್ಕಳ ಬೆವರಿನಿಂದ ಅಟ್ಟದ ಮೇಲೆ ಅಟ್ಟಾ ಕಟ್ಟಿ ದುಡ್ಡಮಾಡಿ,
ಗಿರಿಗಿಟ್ಟೆ ಕಾರು-ಬಾರು ಅಂತಾ ಮಜಾ ಮಾಡ್ತಾರೊ ಈ ಖೂಳ ಜನಾ
ಮಜಾ ಮಾಡ್ತಾರೊ ! .......



# ದೃಶ್ಯ 2



(ಡೊಳ್ಳು ಹೊಟ್ಟೆಯ ನಾಗರಾಜುಶೆಟ್ಟಿ ಗೊಂಬೆ full collar ಸೂಟು, ಕನ್ನಡಕ, ಆತನ ಪಕ್ಕದಲ್ಲಿ ಧೋತಿ ಉಟ್ಟ ಕಾರಕೂನ, ನಾಗರಾಜಶೆಟ್ಟಿ ಗೊಂಬೆ ರೇಗಾಟ).

ನಾಗರಾಜುಶೆಟ್ಟಿ : ಮುಂಡಾಮುಚಗೊಂಡು ಹೋಯ್ತು ಹಾಳಾಗಿ ಹೋಯ್ತು. ನಮ್ಮ ಕಂಪನಿ. ದಿವಾಳಿ ಏಳೋದು ಗ್ಯಾರಂಟಿ. ಅಲ್ರಯ್ಯಾ ನಿಮಗೆ ಎಷ್ಟು ಸಲಾ ಹೇಳ್ಬೇಕು. ಕೂಲಿ ಕೂಲಿಯಲ್ಲಿ ಹಿಡಿತ ಇಲ್ಲಾ ಅಂದ್ರೆ ಈ ನಮ್ಮ estate agency ಬಂದು ಮಾಡಿ ತಿರುಪತಿಗೆ ತಿರುಪತಿಗೆ ಹೋಗಬೇಕಾಗ್ತದೆ.

ಕಾರಕೂನ : ಕೂಲಿ ಹ್ಯಾಗೆ ಕಡಿಮೆ ಮಾಡೋದು ಶೆಟ್ರೆ! ಹೆಣ್ಣಾಳಿಗೆ 50 ರೂಪಾಯಿ, ಗಂಡಾಳಿಗೆ 100 ರೂಪಾಯಿ ದಿನಗೂಲಿ ಕೊಡಲೇಬೇಕು.

ಶೆಟ್ಟಿ : ಕೊಡಪ್ಪ ಕೊಡು, ಯಾರ ಬ್ಯಾಡಂತಾರೆ, ದುಡ್ಡಿನ ಗಿಡಾ ಹಚ್ಚಿದಾರ ನೋಡು ನಿಮ್ಮ ಸಾಹುಕಾರ್ರು, ಅಲ್ಲೋ ಕಡಿಮೆ ಕೂಲಿ ತೊಗೊಳ್ಳೊ ಜನಾನ್ ಹಿಡಕೊಂಡು ಬರಬಾರದೆ.

ಕಾರಕೊನ : ಕಡಿಮೆ ಕೂಲಿ ಯಾರ್ರಿ ತೊಗೊತಾರ್ರಿ, ಈ ತುಟ್ಟಿ ಕಾಲ್ದಾಗ?

ನಾಗರಾಜಶೆಟ್ಟಿ : ಅದಕ್ಕೆ! ಅದಕ್ಕೆ ನಿಮಗೆ ಬುದ್ಧಿ ಇಲ್ಲಾ ಅನ್ನೋದು, ಅಲ್ಲಲೇ ಪೇಪರ್ ದಿನಾ ಓದುತಿರೋ ಇಲ್ಲೋ ಬಿಜಾಪುರ, ಗುಲ್ಬರ್ಗ ಜಿಲ್ಲಾದಾಗ ಮೂರು ವರ್ಷದಿಂದ ಮಳೆ ಆಗಿಲ್ಲ, ಬೆಳಗಾವಿ ಜಿಲ್ಲೆದಾಗ ಎಲ್ಲಾ ಹಳ್ಳಿ ಮಂದಿ ಮಳೆಗಾಲದ ಮಹಾಪೂರಕ್ಕ ನೆಲಾ–ಮನಿ ಕಳಕೊಂಡ ಎಷ್ಟೋ ಹಳ್ಳಿ ಜನಾ ಗುಳೆ ಎದ್ದು ಕೂಲಿ ನಾಲಿ ಹುಡುಕಿಕೊಂಡು ಗೋವಾ, ಬೆಂಗಳೂರಿನ ಕಡೆ ಹೊಂಟಾರಂತ.



ಕಾರಕೂನ : ಅದಕ್ಕೂ ನಮ್ಮ ಕೆಲಸಕ್ಕೂ ಯಾವ ಬಾದರಾಯಣ ಸಂಬಂಧ್ರಿ ಸಾವಕಾರ?

ನಾಗರಾಜಶೆಟ್ಟಿ : ಸಂಬಂಧ ಇಲ್ಲದ ಈ ಶೆಟ್ಟಿ ಮಾತಡೋದೆ ಇಲ್ಲ ತಿಳಿತ, ನೋಡು ಈ ಬಡವರು ಹೊಟ್ಟೆಗೆ ಹಿಟ್ಟ ಇಲ್ಲದಿದ್ರೂ ಮಕ್ಕಳನ್ನು ಹೆರೋದಕ್ಕೇನು ಫುಲ್‌ಸ್ಟಾಪ್ ಕೊಟ್ಟಿರೋದಿಲ್ಲ. ತಿನ್ನಾಕ ಅನ್ನಕ ಗತಿ ಇಲ್ಲದ ಆ ಮಕ್ಕಳನ್ನು ಈ ದಡ್ಡಜನಾ ದುಡೀಲಿಕ್ಕೆ ಹಚ್ಚೋದು ಗ್ಯಾರಂಟಿ ಅವರ ಈ ದಿವಾಳಿ ಪರಿಸ್ಥಿತೀನ ನಾವು ಉಪಯೋಗಿಸೋಬೇಕು. ಮಕ್ಕಳನ್ನ ಕೆಲಸಕ್ಕೆ ಇಟಕೊಂಡ್ರೆ, ಯೂನಿಯನ್, ಸ್ಟ್ರೆಕ್ ಅ೦ತ ತಲೆಬಿಸಿ ಇರೋದಿಲ್ಲ. ಮತ್ತ ಈ ಕುಲಿ–ನಾಲಿ ಮಾಡೋ ಜನಕ್ಕೆ ಕುಡಿತದ ಚಟ ಇದ್ದ ಇರತದೆ ಈ ಜನಾ ಕುಡಿಯೋದನ್ನ ಬಿಡೋದಿಲ್ಲ. ಅದಕ್ಕ ಅವರು ಗಳಿಸಿದ ಕೂಲಿ ಸಾಲೋದಿಲ್ಲ. ಅಂದಾಗ ಅವರು ತಮ್ಮ ಹೆಂಡರು, ಮಕ್ಕಳನ್ನ ಕೂಲಿಗೆ ಹಚ್ಚೋದು ಗ್ಯಾರಂಟಿ. ಅವರ ಈ ಬೇವಕೂಫ್ ಬುದ್ಧಿ ಉಪಯೋಗಿಸಿ ಲಾಭಾ ನಮ್ಮ ಜಾಣತನ.

ಕಾರಕೂನ : ಧಣೀರ ತಲೆ ಅಂದ್ರ ತಲೆ.

ನಾಗರಾಜಶೆಟ್ಟಿ : ನಿನ್ನ ತಲೆ.

## ಹಾಡು

ಕೂಡಿ ಕಳೆದು  
ಹಾಕಿ ಮಾಡು ಲಾಭವ  
ಒಂದು ಎರಡು ಮೂರು ನಾಲ್ಕು  
ಬಡವನ ಬುದ್ಧಿ ಬೆವಕೂಫೂ  
ಹೊಟ್ಟೆಗಿಲ್ಲದೆ, ಬಟ್ಟೆಗಿಲ್ಲದೆ  
ವರ್ಷಕ್ಕೊಂದು ಪಿಳ್ಳೆ ಹೆತ್ತು  
ಗುಲಾಮಗಿರಿಗೆ ಅವರನ್ನ ತಳ್ಳೋ ಗಮ್ಮತ್ತು  
ಅದೇ ನಮ್ಮ ವ್ಯವಹಾರದ ತಾಕತ್ತು  
ಆ ಪಿಳ್ಳೆಗಳ ತಲಿಮ್ಯಾಲೆ ಸೈಜುಗಲ್ಲಿಟ್ಟು  
ಹೊಡೀಬೇಕು ನಾವು ರಾತ್ರಿ ಹಗಲು ತಂಬಿಟ್ಟು  
ಕೂಡಿ ಕಳೆದು ಹಾಕಿ ಮಾಡು ಲಾಭವ.

ನಾಗರಾಜಶೆಟ್ಟಿ : ತಿಳಿತೇನೋ ಬೇವಕೂಫಾ?

ಕಾರಕೂನ : ತಿಳೀತ್ರಿ ನೂರಕ್ಕೆ ನೂರು ತಿಳೀತು.

ನಾಗರಾಜಶೆಟ್ಟಿ : ತಿಳೀತ . . . . ಹಂಗಾದ್ರ ತಿಳಿದ ಮ್ಯಾಲೆ ಇಲ್ಯಾಕ ನಿಂತಗೊಂಡಿ ಹೊಂಡಿನ್ನ. ಕೂಲಿಗಾಗಿ ಮಕ್ಕಳನ್ನ ಹಿಡುಕೊಂಡು ಬಾ.

# ಹಾಡು

ಶೆಟ್ಟಿ ಮಾತ ಕೇಳಿ, ಬಿಟ್ಟಿ ಮೇಸ್ತ್ರಿ
ಹೊಂಟಾನಪ್ಪೋ ಬಡಮಕ್ಕಳ ಬ್ಯಾಟಿಗೆ
ಶ್ರೀರಾಂಪುರ, ಓಕಳಿಪುರ, ಯಶವಂತಪುರ,
ಹೀಗ ಪುಟ್ಟಾಪೂರಾ ಅಖಾ ಶಹರ
ತಿರುಗಿ ಹಿಡದತಂದಾನ್ರೆಪೊ
ಎಳೆ ಕಂದಮ್ಮಗಳನ್ನು ಮಾಡಾಕ ಕೂಲಿ
ಮಾಡಾಕ ಕೂಲಿ.



## ದೃಶ್ಯ 3

(ಶರಣಪ್ಪನ ಗುಡಿಸಲಿನ ಕಟೌಟ್ ಹಿಂದೆ ಓಕಳಿಪುರ ಎಂಬ ಬೋರ್ಡು ಹಾಕಿದರೂ ನಡೆಯುತ್ತದೆ. ಜನರ ಗುಂಪಿನ ಚಿತ್ರ ಶರಣಪ್ಪ ಮೇಸ್ತ್ರಿ ಅವರನ್ನು ಉದ್ದೇಶಿಸಿ ಮಾತನಾಡುತ್ತಿದ್ದಾನೆ. ಬದಿಯಲ್ಲಿ ಕಾರಕೂನ ಮರೆಗೆ ನಿಂತು ಇವರ ಮಾತು ಕೇಳುತ್ತಿದ್ದಾನೆ. ಗುಂಪಿನ ಚಿತ್ರವನ್ನು ಕಾರ್ಡುಶೀಟಿನಲ್ಲಿ ಅಥವಾ ಕ್ಯಾನವಾಸಿನಲ್ಲಿ ಬಿಡಿಸಿ ತೋರಿಸಬಹುದು. ಅಥವಾ ನಟರೇ ತಮ್ಮ ಕೈಗಳನ್ನು ಎತ್ತಿ ಪರದೆಯಲ್ಲಿ ಕಾಣುವಂತೆ ಮಾತಾಡಬಹುದು.)

ಮೇಸ್ತ್ರಿ : ನೋಡ್ರೆಪಾ, ನಮ್ಮ ಊರಾಗ ಬರಗಾಲ ಬಿದ್ದೈತೆ ಅಂತ ಈ ಬೆಂಗಳೂರು ಸಿಟಿ ಸೇರಿಕೊಂಡೀವಿ. ಕಡಿಮೆ ಅಂದ್ರ ಆರು ತಿಂಗಳಾದರೂ ನಾವು ಈ ಸಿಟ್ಯಾಗ ಜೀವನಾ ಮಾಡಬೇಕು.

ಗುಂಪಿನಲ್ಲಿ ಧ್ವನಿ : ಆರು ತಿಂಗಳ ನಾವು ಇಲ್ಲಿ ಹ್ಯಾಗರಿ ಜೀವನಾ ಕಳೆಯೋದು? ಮೇಸ್ತ್ರಿ ಊರಿನಿಂದ ತಂದ ಇದ್ದ ಬಿದ್ದ ಕಾಳು ಕಡ್ಡಿ ಎಲ್ಲಾ ಮುಗ್ಯಾಕ ಬಂದಾವು. ಕೈಯಾಗಿದ್ದ ಬಿಡಿಕಾಸು ಖಾಲಿ ಆಗ್ಯಾವು ಮುಂದ ಹ್ಯಾಂಗರಿ.

ಮೇಸ್ತ್ರಿ : ನೋಡಪಾ, ಇದು ದೊಡ್ಡ ಪಟ್ಟಣ, ದೊಡ್ಡ ದೊಡ್ಡ ಬಿಲ್ಡಿಂಗ್ ಕಟ್ಟಸೋರ ಭಾಳಜನಾ ಇದ್ದಾರ. ಅಲ್ಲಿ ಗೌಂಡಿ ಕೆಲಸಾ, ಕೂಲಿ ಕೆಲಸಾ ಎಲ್ಲಾರೂ ಕೂಡಿ ಮಾಡೋಣ.

ಗುಂಪು : ಎಲ್ಲಾರೂ ಕೂಡಿ ಅಂದ್ರ, ನಮ್ಮ ಹೆಂಡ್ರ ಮಕ್ಕಳನ್ನೂ ಕೂಲಿಗೆ ಹಚ್ಚಬೇಕೇನು?

ಮೇಸ್ತ್ರಿ : ನಮ್ಮ ಹೆಣ್ಣುಮಕ್ಕಳು ದುಡಿಯೋದೇನು ಹೊಸದಲ್ಲಾ, ಹಳ್ಯಾಗಿದ್ದಾಗ ಹೊಲದಾಗ ದುಡೀತಿದ್ದಿಲ್ಲಾ? ಹಂಗ ನಮ್ಮ ಮಕ್ಕಳೂ ಕುಲದ ಹ್ವಾರೇದಾಗ ಅನುವು ಆಗ್ತಿದ್ದಿಲ್ಲಾ? ಹಂಗ ಇಲ್ಲಿನೂ ಕೂಲಿ ಮಾಡೋದ್ರೆಪಾ.

ಗುಂಪು : ಏ ಭೇಷ್ ಹೇಳ್ತಿ ಬಿಡು ಮೇಸ್ತ್ರಿ, ತಿಳಿದವ ನೀನ, ಹೀಂಗಂದ್ರೆ ಹ್ಯಾಂಗ? ಊರಾಗಿನ ಮಾತು ಬ್ಯಾರೆ, ಇಲ್ಲಿ ಮಾತು ಬ್ಯಾರೆ, ಊರಾಗ ನಮ್ಮನ್ನ ದುಡಿಸಿಕೊಳ್ಳೋರು ನಮ್ಮನ್ನ ಅಣ್ಣ-ತಮ್ಮಂದಿರ್ಧಂಗ, ಮಕ್ಕಳಂಗ ನೋಡ್ಕೋತಿದ್ರು. ಮತ್ತೆ ನಮ್ಮ ಮಕ್ಕಳು ಒತ್ತಾಯಕ್ಕೆ ಕೆಲಸಾ ಮಾಡ್ತಿದ್ದಿಲ್ಲಾ. ದಗದಾ ಕಲಕೊಳ್ಳಾಕ ನಮ್ಮ ಜೊತೆ ಬರ್ತಿದ್ರು. ಇಲ್ಲಿ ಜನರಿಗೆ-ಕೂಲಿ ಅವರಂದ್ರ ಕಾಲಕಸಾ, ಅದ್ರಾಗಂತೂ ಹೆಣ್ಣುಮಕ್ಕಳಂತೂ ಮರ್ಯಾದೆಯಿಂದ ಕೆಲಸ ಮಾಡೋ ಹಂಗಿಲ್ಲ. ನಿನಗ ಗೊತ್ತದ ಹೋದವಾರ ಆ ರೋಡ ಕೆಲಸ ಮಾಡೋ ಮುಂದ ನಮ್ಮ ನಿಂಗವ್ವನ ಮರ್ಯಾದಿ ಏನಾತೂ ಅಚಿತ.

ಮೇಸ್ತ್ರಿ : ಇನ್ನ ಮುಂದೆ ಹಂಗಾಗಂಗಿಲ್ಲಾ, ಅದರ ಜವಾಬ್ದಾರಿ ನನಗಿರಲಿ. ಮತ್ತ ನೋಡ್ರೆಪಾ, ನಿಮ್ಮ ಮಕ್ಕಳೂ ನಿಮ್ಮ ಜೊತೆ ದುಡೀಲಿಕ್ಕೆ ಬರಬೇಕಾಕೈತಿ. ನಿಮ್ಮ ದುಡಿಮಿ ಇಡೀ ಸಂಸಾರ ಸಾಕಲಿಕ್ಕೆ ಸಾಕಾಗೋದಿಲ್ಲ.



ಗುಂಪು : ಸಾಕಾಗದಿದ್ರ ಇಲ್ಲ, ನಾವು ಮಕ್ಕಳನ್ನು ಕೆಲಸಕ್ಕೆ ಕಳಸೋದಿಲ್ಲ.

ಮೇಸ್ತ್ರಿ : ಮತ್ತ ಮುಂಜಾನಿಂದ ಎಲ್ಲಿಗೆ ಕಳಸ್ತಿ.

ಗುಂಪು : ಸಾಲಿಗೆ, ಈಗ ಕಾಲ ಬದಲಾಗೈತೆ ನಾವು ಸಾಲಿ ಬಿಟ್ಟೇವಿ ಅಂತ ನಮ್ಮ ಮಕ್ಕಳನ್ನು ಸಾಲಿ ಬಿಡಿಸೋದ?

ಮೇಸ್ತ್ರಿ : (ನಕ್ಕು) ಸಾಲಿಗೆ ನಿಮಗೇನು ತಲೀ ಕೆಟ್ಟದೇನ್ರಲೆ, ಇಲ್ಲೇನು ನಮ್ಮ ಹಳ್ಯಾಗಿದ್ದಾಂಗ ಸಾಲಿ ಅವ ಅಂತ ತಿಳದೀರಿ ಏನ್ರಲೆ, ನಮ್ಮನ್ನಾವು ಮಾರಿಕೊಂಡ್ರೂ ಇಲ್ಲಿ ಸಾಲಿ ಫೀ ಕಟ್ಟಾಕಾಗಾಣಿಲ್ಲ. . . . ಸುಮ್ಮನ ನನ್ನ ಮಾತು ಕೇಳ್ರಿ ನಾಳಿಂದ ನಾವೆಲ್ಲರೂ ಕೂಲಿ ಹಿಡಿಲಿಲ್ಲಾ ಅಂದ್ರ ಉಪವಾಸಾ ಸಾಯೋದು ಗ್ಯಾರಂಟಿ ತಿಳೀತಾ ಹೊರಡ್ರಿನ್ನ . . . .(**ಗುಂಪು ಗಜಿ-ಬಿಜಿ ಮಾಡುತ್ತಾ ಹೊರಡುತ್ತದೆ. ಕಾರಕೂನ ಜವಾನ ಪ್ರವೇಶಿಸುತ್ತಾನೆ**).

ಕಾರಕೂನ: (ವಿಕಟ ದೇಶಾವರಿ ನಗೆ ನಕ್ಕು) ಶರಣಪ್ಪ ಮೇಸ್ತ್ರಿ ಅಂದ್ರ ನೀನ ಏನಪಾ?

ಶರಣಪ್ಪ : ಹೌದ್ರಿ ನಾನರಿ, ಯಾಕ್ರಿ ಏನಾಗಬೇಕಾಗಿತ್ತು.

ಕಾರಕೂನ: ಛೆ, ಛೆ, ಎಷ್ಟು ಹುಡಕಬೇಕಪಾ ನಿನ್ನ, ಆ ರಿಂಗರೋಡ ಮಾಡೋ ಮಂಜುನಾಥ ಕಂಟ್ರಾಕ್ಟರ್ ಜೆಸಿಬಿಮಶಿನ್‌ನ ಡ್ರಾಯವರ್ ನಿನ್ನ ಅಡ್ರೆಸ್ ಕೊಟ್ಟಾ.

ಶರಣಪ್ಪ : ಅಲ್ಲಾ ವಿಷಯ ಏನ ಹೇಳ್ರಿ.

ಕಾರಕೂನ: ಏನ ಹೇಳ್ಲಿಪ ನಮ್ಮ ಸಾಹುಕಾರರು ಅದೇ ತಿರುಪತಿ ಕನ್ಸ್ಟ್ರಕ್ಷನ್ ಕಂಪನಿ ನಾಗರಾಜಶೆಟ್ರು ಭಾಳ ಉದಾರಿಗಳು, ಮಂದಿ ಕಷ್ಟಾ ಅವರಿಗೆ ನೋಡೋಕಾಗಲ್ಲ. ನಿಮ್ಮ ಜನಾ ಅದೇ ಬರಗಾಲದಿಂದ, ಮಹಾಪೂರದಿಂದ ತತ್ತರಿಸಿ ಇಲ್ಲಿಗೆ ಬಂದೀರಿ, ನೋಡು ನಿಮಗ ಉಪಕಾರಾ ಮಾಡೋ ದೃಷ್ಟಿಯಿಂದ ತಮ್ಮ ಕನ್ಸ್ಟ್ರಕಶನ್ ಕಂಪನ್ಯಾಗ ಕೆಲಸಾ ಕೊಡಲು ದೊಡ್ಡ ಮನಸ್ಸು ಮಾಡ್ಯಾರ.

ಶರಣಪ್ಪ : ಹೌದ್ರಿ, ಭಾಳ ಸಂತೋಷ ಆತು ಬಿಡ್ರಿ.

ಆವಾನ : ಅಂದ್ಹಾಂಗ ನೀವು ಎಷ್ಟು ಜನಾ ಇದ್ದೀರಿ.

ಮೇಸ್ತ್ರಿ : ಹೆಂಗಸರೂ, ಗಂಡಾಳು, ಮಕ್ಕಳು ಸೇರಿ ಇಡೀ ಈ ಝೋಪಡಿ ಪಟ್ಟಿ ಏರಿಯಾದಾಗ ೩೦೦ ಜನಾ ಇದ್ದೀವ್ರಿ.

ಕಾರಕೂನ: ಅದ್ರಾಗ ಮಕ್ಕಳೆಷ್ಟು? ಅದೇ ಕೆಲಸಕ್ಕೆ ಬರೋವ್ರು?

ಮೇಸ್ತ್ರಿ : ಸುಮಾರು ಒಂದು ನೂರೈವತ್ತಿರಬೇಕ್ರಿ.

ಕಾರಕೂನ: ಭಾಳ ಒಳ್ಳೇದು, ಮಕ್ಕಳೂ ಅಂದ್ರ ನಮ್ಮ ಯಜಮಾನರಿಗೆ ಪಂಚಪ್ರಾಣ. ಪಾಪ ಅವರು ಉಪವಾಸಾ ಬೀಳಬಾರದು ನೋಡು, ಅದಕ್ಕೆ ದೊಡ್ಡ ಮನಸ್ಸು ಮಾಡಿ ಅವರಿಗೂ ನಮ್ಮ ಧಣೇರು ಕೆಲಸಾ ಕೊಟ್ಟ ಕೊಡ್ತಾರ.

ಮೇಸ್ತ್ರಿ : ಹಾಂಗರಿ! ಭಾಳ ಸಂತೋಷ ಆತು ಬಿಡ್ರಿ. ನೀವು ಇಷ್ಟ ಹೇಳ್ತೀರಿ ಅಂದ ಮ್ಯಾಗ ನಾಳಿಂದನ ನಾವು ಕೂಲಿಗೆ ಹಾಜರಾಕ್ತೀವಿ.

ಕಾರಕೂನ : ಹಾಂಗ ಆಗಲಿ (ಹೊರಟಾಂವ ನಿಂತು) ಅಂದ್ಹಾಂಗ ಇದು ತೊಗೊ ಅಡ್ವಾನ್ಸ್.

ಮೇಸ್ತ್ರಿ : ಏ ಅಡ್ವಾನ್ಸ್ ಯಾಕ್ರೀ ಯಾಕ್ರೀ . . . .

ಕಾರಕೂನ: ಏ ತೊಗೋಳೊ ಮಕ್ಕಳಿಗೆ ಕಾಳು ಕಡಿ ತೊಗೊಂಬಾ. ಪಾಪ ಮಕ್ಕಳು ಉಪವಾಸಾ ಬೀಳಬಾರದು ನೋಡು (ಹಿ.ಹಿ.ಹಿ. ಎಂದು ನಗುತ್ತ ಆತ ಹೊರಡುತ್ತಾನೆ.)

**(ರಂಗದಲ್ಲಿ ಕತ್ತಲ) . . . . . . . . . . . . . . .(ಮ್ಯೂಸಿಕ್)**



## ಹಾಡು

ಕಾರಕೂನ–ಜವಾನ ಕೂಡಿಕೊಂಡು
ಮಾಡ್ಯಾರ ನೋಡ್ರಿ ಪ್ಲ್ಯಾನ
ಒಡಕ ಬಾಯಿಯಿಂದ
ದಡಬಡಸಿ ನುಡಿದಾರ ನಮ್ಮ
ಸಾವಕಾರ ಶಟ್ರು ನಿಮ್ಮ ಹಸಿವು ನೀಗಸ್ತಾರ
ನಾಳಿಂದ ನಮ್ಮ ಜೀವ ಹಸನಾಗತೈತಂತ
ಕನಸು ಕಾಣುತ ಬಡಜನತಾ ಮಲಗ್ಯಾರ,
ಹುಣ್ಣಿಮೆಯ ಚಂದ್ರಾಮನೂ ಪಟ್ಟಣದ ಕಟ್ಟಡದ
ತುದಿ ಮ್ಯಾಗಿಂದ ತನ್ನ ಬೆಡ್‌ಲ್ಯಾಂಪಿನಂತ
ಬೆಳಕನು ಚೆಲ್ಲಿ ಇವರ ಮುಗ್ಧತನಕ ಲೊಚಗುಟ್ಟಿ ಒಳ ಒಳಗ ಮರಗ್ಯಾನ
ಲೊಚಗುಟ್ಟಿ ಒಳ ಒಳಗ ಮರಗ್ಯಾನ;
**(ಉರಾತ್ರಿಯ ನಂತರ ಬೆಳಕಾಗುತ್ತದೆ)** ಬೆಳಗು ಹರಿದರೇನು! ಈ ಶಹರದಾಗ
ಸೂರ್ಯನ ಹೊಂಗಿರಣಕ ಬಾನೆತ್ತರದ ಬಿಲ್ಡಿಂಗ್
ಅಡ್ಡ ಬಂದು ನೆಲಕ ಬೀಳದ್ಹಾಂಗ ತಡದಾವ
ಮುಂಜಾವಿನ ಸವಿಯನ್ನು ಸವಿಯುದಕ
ಮಂದಿಗೆ ಸಮಯ ಎಲ್ಲೈತಿ ಈ ಪಟ್ಟಣದಾಗ
ಓಡಬೇಕು ಸಿಟಿಬಸ್ ಹಿಡಿಬೇಕು
ಓಡಬೇಕು ಸೈಕಲ್ ಸ್ಕೂಟರ್ ಬೈಕ್ ಹತ್ತಬೇಕು
ನೌಕರಿಚಾಕರಿಗೆ ಓಡಬೇಕು
ಓಡಬೇಕು ಓಡಬೇಕು

ಕಿಳ್ಳಿಕೇತ : ಹಿಂಗ ನಮ್ಮ ಝೋಪಡಿ ಪಟ್ಟಿ ಜನಾನೂ ತಂಡೋಪ ತಂಡವಾಗಿ ಹೊಂಟೆತ್ರೆಪಾ ಚಾಕರಿಗೆ.

(ಮ್ಯೂಸಿಕ್, ಝೋಪಡಿ ಪಟ್ಟಿ ಜನಾ ಕೆಲಸಕ್ಕೆ ಹೋಗುವ ಗೊಂಬೆಗಳು ಒಂದು ದಿಕ್ಕಿನಿಂದ ಇನ್ನೊಂದು ದಿಕ್ಕಿಗೆ ಹೊರಡುತ್ತವೆ. ಇವೆಲ್ಲವನ್ನೂ ಕಾರ್ಡುಶೀಟಿನಲ್ಲಿ ಮಾಡಿಕೊಳ್ಳಬಹುದು. ಜೊತೆಗೆ ಇದ್ದ ಗೊಂಬೆಗಳನ್ನು ಬಳಸಬಹುದು).

## ದೃಶ್ಯ 4

**(ಒಂದು ಹೆಣ್ಣು ಮಗು ಅಳ್ತಾ ಇದೆ. ಆ ಮಗುವಿನ ತಂದೆ, ಮೇಸ್ತ್ರಿ ಅದಕ್ಕೆ ಗದರುತ್ತಿದ್ದಾನೆ)**

**(ಒಂದು ಗುಡಿಸಲಿನ ಕಟೌಟ್)**

**ಮೇಸ್ತ್ರಿ(ಶರಣಪ್ಪ)** : ಏ ಅಳೋದು ನಿಲ್ಸು ಮುಖಾ ತೊಕ್ಕೊಂಡು ಸೀದಾ ಕೆಲ್ಸಕ್ಕ ನಡಿ.

**ಹುಡುಗಿ** : ಹೂಂ. . . ಹೂಂ. . . ಇಲ್ಲಾ ನಾ ಕೆಲ್ಸಕ್ಕ ಬರೋದಿಲ್ಲ. (ಶಾರದಾ)ನಾ ಶಾಲೆಗೆ ಹೋಗ್ತೀನಿ. ಹೂಂ. . ಹೂಂ. .

**ಮೇಸ್ತ್ರಿ** : ಹಾಂ . . . ಹಾಂ. . . ಶಾಲೆಗೆ ಹೋಗ್ತಾಳಂತ ಶಾಲಿಗೆ, ಹೊಟ್ಟೆಗೆ ಹಿಟ್ಟಿಲ್ಲ, ಜುಟ್ಟಕ್ಕ ಮಲ್ಲಿಗೆ ಹೂ ಬಯಸಿದ್ರಂತ, ಲೇ ಶಾರಿ ಒಳ್ಳೆ ಮಾತಿನಿಂದ ಕೆಲಸಕ್ಕ ನಡಿ ಇಲ್ಲದಿದ್ರ ನಿನ್ನ ಚಮಡಾ ಸುಲದ ಬಿಡ್ತೀನಿ.

**ಮಗು** : ಇಲ್ಲಾ ನಾ ಕೆಲಸಕ್ಕ ಬರೋದಿಲ್ಲ . . . . ಬರೋದಿಲ್ಲ ನಾ ಶಾಲೆಗೆ ಹೋಗ್ತೀನಿ

**ಮೇಸ್ತ್ರಿ** : ಶಾಲೆಗೆ ಹೋಗ್ತೀ ಅದ್ಯಾಂಗ ಹೋಗ್ತೀ ಹೋಗು ನೋಡೋಣ ನಿನ ನಿನ

**(ಆತ ಮಗುವಿಗೆ ಹೊಡೆಯುತ್ತಾನೆ ಮಗು ಅಳುತ್ತದೆ ಹೆಂಡತಿಯ ಪ್ರವೇಶ)**

**ಹೆಂಡತಿ (ಮಾದೇವಿ)** : ಬಿಡ್ರಿ . . . . ಬಿಡ್ರಿ . . . . ಮಗೂನ್ ಹಂಗ್ಯಾಕ್ ಹೊಡೀತಿರಿ.

**ಮೇಸ್ತ್ರಿ** : ಏ . . . . ನೀ ಇದ್ರಾಗ ನಡುವ ಬರಬ್ಯಾಡ . . . . ಅಲ್ಲಾ ಕೆಲಸಕ ಹೊತ್ತಾತು ನಡಿ ಅಂದ್ರ ಕುಂಟ ನೆಪಾ ತಗದಾಳ. ಅಕಿ ಕೆಲಸಕ್ಕ ಬರೋದಿಲ್ಲಂತ ಸಾಲಿಗೆ ಹೋಗ್ತಾಳಂತ ಸಾಲಿಗೆ!

**ಹೆಂಡತಿ** : ಅಲ್ರಿ ನಾವಿಬ್ರೂ ಕೂಲಿ ಮಾಡ್ತೀವಿ. ಮತ್ಯಾಕ ಆ ಮಗು ದುಡೀಬೇಕು!. . . ಇರೊ ಒಬ್ಬ ಮಗಳಿಗೆ
(ಮಾದೇವಿ) ನಾವ್ಯಾಕ ಸಾಲಿ ಕಲಸಬಾರದು. ಅಕೇನ್ ದಡ್ಯಲ್ಲ, ಹಳ್ಯಾಗಿದ್ದಾಗ ಶಾನಭೋಗರ ಮಗಳು ಸಾವಿತ್ರಿ ಜೊತಿ ಸಾಲಿಗೆ ಹೋಗ್ತಿದ್ದಿಲ್ಲಾ?

**ಮೇಸ್ತ್ರಿ** : ಏ ಹಳ್ಯಾಗ ಹೋಗ್ತಿದ್ಲು ಖರೆ. ಇದು ಶಹರ. ಇಲ್ಲಿ ಎಲ್ಲಾ ಇಂಗ್ಲೀಷ್ ಸಾಲಿ ಅದಾವ. ಗವರ್‌ಮೆಂಟ್ ಸಾಲಿ ಇಲ್ಲಿಂದ ೫ ಕಿಲೋಮೀಟರ್ ದೂರ ಅದಾವ, ಫೀಸು ಯುನಿಫಾರ್ಮ ಮಣ್ಣುಮಸಿ ಅಂತ ಇಕೀಗೆಲ್ಲಿಂದ ರೊಕ್ಕಾ ತರೋದು. ಈ ಝೋಪಡ ಪಟ್ಟಿಯೊಳಗ ಎಲ್ಲಾರೂ ಸಾಲಿಗೆ ಹೋಗ್ತಾರಂತ ತಿಳಿದಿ! ಮನಿಮಂದೆಲ್ಲಾರೂ ದುಡದ್ರನೂ ನಮ್ಮ ಒಂದೊಪ್ಪತ್ತಿನ ಗಂಜಿ ಹುಟ್ಟೋದಿಲ್ಲ? ಅಂಥಾದ್ರಾಗ . .

**ಹೆಂಡತಿ(ಮಾದೇವಿ)** : ರ‍್ರಿ . . . ಅದೇನು ಕಷ್ಟ ಬರ್ತದೋ ನಮಗ ಬರಲಿ ಆ ಮಗುವಿನ ಭವಿಷ್ಯ ಹಾಳ ಮಾಡೋದು ಬ್ಯಾಡ, ಆಕೀಗೆ ಸಾಲಿ ಕಲಸೋಣ.

**ಮೇಸ್ತ್ರಿ** : ಅದು ಸಾಧ್ಯಾಗ . . . ಇಲ್ಲ ಶೆಟ್ರ ಕಡೀಂದ ಮನಿ ಖರ್ಚಿಗಂತಾ ಅಡ್ವಾನ್ಸ್ ತೊಗೊಂಡಾತು, ಅಕಿ ಕೆಲಸಕ್ಕೆ ಬರಾಕ ಬೇಕು. ನಡಿ . . . . . . ನಡಿ . . . .

**(ವ್ಯಕ್ತಿ ಮಗುವನ್ನು ಎಳೆದುಕೊಂಡು ಹೋಗುತ್ತಾನೆ ಮಗು ಸಾಲಿ ಸಾಲಿ ಅಂತಾ ಅಳ್ತಾ ಇದೆ. ಹೆಂಡತಿಯೂ ನಿಸ್ಸಹಾಯಕಳಾಗಿ ಗಂಡನೊಡನೆ ಹೊರಡುತ್ತಾಳೆ)**



### ಹಾಡು

ಅತ್ತು ಅತ್ತು ಗೋಳಾಡಿದರು
ಬತ್ತೇ ಹೋಗಿತ್ತು ಎದೆಯ ಪ್ರೀತಿ
ತುತ್ತು ಅನ್ನಕೆ ಸತ್ತು ಸತ್ತು
ಮತ್ತೆ ಕೂಲಿಗೆ ಎಳದರು ಕಂದಮ್ಮನ
ಸಾಲಿ ಸಾಲಿ ಅಂತ ಅದರ ಕೂಗು
ಕೂಲಿ ಕೂಲಿ ಅಂತ ಇವರ ಬಾಳು.



## ದೃಶ್ಯ 5

(ಒಂದು ದೊಡ್ಡ ಬಿಲ್ಡಿಂಗಿನ ಚಿತ್ರ ಅದರ ಪಕ್ಕ ಒಂದಿಷ್ಟು ಮಕ್ಕಳು ದೊಡ್ಡವರು ಸೈಜುಗಲ್ಲು ಹೊತ್ತುಕೊಂಡು ಕೆಲಸ ಮಾಡುತ್ತಿರುವ ದೃಶ್ಯ music ನಡೆಯುತ್ತಿದ್ದಂತೆ, ಕಾರಕೂನ ಹಾಗೂ ಒಬ್ಬ ಜವಾನ ಇವರು ಪರಸ್ಪರ ಮಾತನಾಡುತ್ತಿದ್ದಾರೆ).

ಕಾರಕೂನ: ಲೇ ಜವರಾ ನೋಡಿದೇನು ನನ್ನ ಸಾಹಸಾ?

ಜವಾನ : ಸಾಹೇಬ್ರ ಅಂತೂ ಕಡಿಮೆ ಕೂಲಿ ಮಾಡೋ ಜನರ ದಂಡ ಹಿಡಕೊಂಡು ಬಂದ್ರಿ. ಸಾವುಕಾರ್ರು ಖುಷಿಯಾಗಿ ನಿಮಗೆ ಈ ತಿಂಗಳ ಪಗಾರ ಹೆಚ್ಚಿಗೆ ಮಾಡೋದು ಗ್ಯಾರಂಟಿ ಅಂದಂಗಾತು.

ಕಾರಕೂನ: ಆ ಸಾವಕಾರ ಎಂಜಲ ಕೈಲಿ ಕಾಗೆ ಓಡಿಸದ ಮಗಾ, ಆತ ಪಗಾರ ಜಾಸ್ತಿ ಮಾಡ್ತಾನಂತ ತಿಳಿದೀ, ಅದು ಸಾಧ್ಯಾನ ಇಲ್ಲ. ನಾವು ಇದ್ದದ್ರಾಗ ಸುಖ ಪಡಿಬೇಕು.

ಜವಾನ : ಏನ್ರಿ ಹಂಗಂದ್ರ?

ಕಾರಕೂನ: ಲೇ ಜವರಾ ಆ ಹೊಸಾ ದಂಡ ಬಂದೈತಲ್ಲಾ ಬರಗಾಲದ ಹಳ್ಳಿಯಿಂದ ಅವರಿಗಂತೂ ಹೊಟ್ಟಿ ಹೊರಲಿಕ್ಕೆ ಕೂಲಿ ಮಾಡ್ಯಾಕಬೇಕು. ಅವರ ಕೂಲಿ ಒಳಗ ನಾವು ಕಮಿಶನ್ ಹೊಡೀಬೇಕು. ಮತ್ತ ಹಂಗ ಪುಗಶೆಟ್ಟಿ ಮಜಾನೂ ತೊಗೋಬೇಕು.

ಜವಾನ : ಪುಗಶೆಟ್ಟಿ ಮಜಾನ

ಕಾರಕೂನ: ಹೂಂ ಮತ್ತ . .ಲೇ ಅಲ್ನೋಡು ಆ ಹೊಸಾ ಹುಡುಗಿ ಹ್ಯಾಂಗ ಮೈಕೈ ತುಂಬಿಕೊಂಡೈತಿ ಅದ ನೋಡು ನಮ್ಮ ಮಜಾ.

ಜವಾನ : ಆಂ. . .ಆಂ . . .(ನಕ್ಕು) ತಿಳೀತು ತಿಳೀತು. ನಡೀರಿ ಮತ್ತ. (ಆ ಗೊಂಬೆಗಳು ಆ ಮಗು ಇದ್ದ ಗೊಂಬೆ ಹತ್ತಿರ ಬರುತ್ತವೆ).

(ಮಗುವಿನ ಹತ್ತಿರ ಕಾರಕೂನ – ಜವಾನ ಬರುತ್ತಾರೆ. ಮಗು ಕೆಲಸ ಮಾಡುತ್ತಿದೆ).



ಕಾರಕೂನ: (ಜವಾನನಿಗೆ) ಲೇ ಜವರಾ ಆ ಹುಡಿಗೀನ ಮಾತಾಡಸಲೇ

ಜವಾನ : ಏ ಹೋಗ್ರಿ ರೈಟರ್ರೆ, ನನಗೆ ಒಂಥರಾ ಆಕೈತಿ.

ಕಾರಕೂನ: ಮಗನ ಒದೀತೀನ ನೋಡು ಒಂಥರಾ ಆಗಬೇಕಾದ್ದು ನನಗ ನಿನಗಲ್ಲ ಮಾತಾಡಿಸು.

ಜವಾನ : ಅದ್ಹ್ಯಾಂಗ್ರೀ ಮಾತಾಡಸಲಿ ಕಾರಣ ಇಲ್ಲದ . . . .

ಕಾರಕೂನ: ಅದೂ ಖರೆ ಲೇ ಜವರಾ ತೊಗೋ ಈ ಚಾಕಲೇಟು

ಜವಾನ : ಅಯ್ಯೋ ಕೊಡ್ರಿ ನನಗ Campco ಚಾಕಲೇಟ ಅಂದ್ರ ಭಾಳ ಇಷ್ಟಾ.

ಕಾರಕೂನ: ಲೇ ಮಗನ ನಿನಗಲ್ಲ ಆ ಹುಡಿಗಿಗೆ ಕೊಡು

ಜವಾನ : (ಅನುಮಾನದಿಂದ) ಆ ಹುಡಿಗ್ಗೆ ಕೊಡುತೀನಿ . . .

ಕಾರಕೂನ: ಲೆ ನನ್ನ ಹೆಸರು ಹೇಳಿ ಕೊಡು ಸಾಹೇಬ್ರ ಆಫೀಸಿನ್ಯಾಗ ಇನ್ನು ಇಂಥ ಚಾಕಲೇಟು ಭಾಳ ಅದಾವು ಬಾ ಕೊಡ್ತಾರ ಅಂತ ಹೇಳು. ಹೋಗು.

ಜವಾನ : (ಪೆಚ್ಚು ಮೋರೆ ಹಾಕಿ) ಹಂಗ ಆಗಲ್ರಿ. (ಆತ ಹೋಗುತ್ತಾನೆ. ಜವಾನ ಆ ಹುಡುಗಿಯ ಹತ್ತಿರ ಬಂದು) ಬೇಬಿ ನಿನ್ನ ಹೆಸರೇನು?

ಶಾರದೆ : ಶಾರದಾ

ಜವಾನ : ಭಾಳ ಒಳ್ಳೇ ಹೆಸರು, ನಿನಗ ಚಾಕಲೇಟು ಅಂದ್ರ ಗೊತ್ತಾ?

ಶಾರದೆ : ಗೊತ್ತು. ಹಳ್ಳ್ಯಾಗ ನಮ್ಮ ಸಾವಕಾರು ಮಕ್ಕಳು ತಿಂತಿರ್ತಾರ.

ಜವಾನ : ನೀನೂ ತಿನ್ನಾಕಂತೆ ತೊಗೊ ಮತ್ತೆ ನನ್ನ ಜೊತೆಗೆ ಬಾ ನಮ್ಮ ಕಾರಕೂನ ಸಾಹೇಬ್ರ ಆಫೀಸಿನ್ಯಾಗ ಡಬ್ಬಿ ತುಂಬ ಚಾಕಲೇಟು ಅದಾವ ಕೊಡತಾರ.

ಶಾರದಾ : ಆ ಟೊಪ್ಪಿಗೆ ಕಾಕಾನ ಹತ್ರ ಚಾಕಲೇಟ ಅದಾವ

ಜವಾನ : ಕಾಕಾ ಅಲ್ಲ ಮಾಮಾ ಅನ್ನು

ಶಾರದಾ : ನನಗೇನೂ ಬ್ಯಾಡ. ನೀವ ತಿನ್ನರಿ. ನನ್ನ ಮ್ಯಾಲ ದಯಾ ತೊರಸರಿ ನಮ್ಮ ಅಪ್ಪಗ ಹೇಳಿ ನನ್ನ ಸಾಲಿಗೆ ಕಳಸಿರಿ.

ಜವಾನ : ನಾ ತಿನ್ನತಿದ್ದೆ. ನನ್ನಗ ಸಕ್ರಿ ಕಾಯಿಲೆ, ನಾ ಸಿಹಿ ತಿನ್ನೊ ಹಂಗಿಲ್ಲ. ನೀನ ತೊಗೋ ನಡೀ ನನ್ನ ಜೊತಿಗೆ.

ಶಾರದಾ : ಎಲ್ಲಿಗೆ ನಾ ಬರೋದಿಲ್ಲ. ನನ್ನ ಬಿಡ್ರಿ.

ಜವಾನ : ಏ ಸುಮ್ಮನ ನಡಿ.

ಶಾರದೆ : ನನ್ನ ಬಿಡ್ರಿ . . . . ನನ್ನ ಬಿಡ್ರಿ.

ಕಾರಕೂನ : (ದೂರ ನೋಡುತ್ತಾ ನಿಂತವಾ ಬಂದು) ಲೇ ಜವರಾ ಬಿಡಬ್ಯಾಡ ಆಕೀನ ಹೊತಗೊಂಡು ನಡಿ.

ಆವಾನ : ಏ ಸುಮ್ನ ನಡಿ . . . ಕಾರಕೂನ ಸಾವುಕಾರ ಹೇಳ್ತಾರ ನಡಿ.

ಶಾರದೆ : ನಾ ಬರಂಗಿಲ್ಲ. ನಾ ಬರಂಗಿಲ್ಲ . . . . ನಾ ಈ ಕೆಲಸಾ ಮಾಡಂಗಿಲ್ಲ . . . . ನಾ ಸಾಲಿಗೆ ಹೋಗ್ತೀನಿ. (ಮಗು ಬೇಡ ಬೇಡ ನನ್ನ ಬಿಟ್ಟ ಬಿಡ್ರಿ ನಾ ಸಾಲಿಗೆ ಹೋಗ್ತೀನಿ ಎಂದು ಅಂಗಲಾಚಿ ಬೇಡಿಕೊಳ್ಳುತ್ತದೆ).

ಕಾರಕೂನ : ಸಾಲಿಗೆ ಹೋಗ್ತೀಯಾ ಹಂಗಾರ ನನ್ನ ಜೊತೆ ಬಾ ನಾ ನಿನ್ನ ದೊಡ್ಡ ಸಾಲಿಗೆ ಕರಕೊಂಡು ಹೋಗ್ತೀನಿ (ಎಂದು ಆ ಮಗುವನ್ನು ಎಳೆದುಕೊಂಡು ಹೋಗ್ತಾನೆ).

(ಮ್ಯೂಸಿಕ್, ಆಗ ರಂಗದ ಇನ್ನೊಂದು ತುದಿಯಿಂದ ಕಿಳ್ಳಿಕ್ಯಾತ ಗಣಪತಿ ಪ್ರವೇಶಿಸುತ್ತಾರೆ).

ಗಣಪತಿ : ಲೇ . . . ಲೇ . . . ನಿಲ್ಲಿಸೋ ನಿನ್ನ ಗೊಂಬೆ ಆಟಾನ ಅಲ್ಲೋ ನಿನ್ನ ಪಾತ್ರಗಳು ಇಷ್ಟು ಕಟಗರೇನೋ.

ಕಿಳ್ಳಿಕ್ಯಾತ : ಸ್ವಾಮಿ ಇವು ನನ್ನ ಪಾತ್ರಗಳಲ್ಲ ಜೀವನದಾಗಿನ ಪಾತ್ರ. ಜಗತ್ತಿನ್ಯಾಗ ಏನ ನಡದದ ಅನ್ನೋದನ್ನ ನಾವು ಆಟ ಮಾಡಿ ತೋರಿಸೊವರು ಅಷ್ಟ . . . ನೀವು ತಡ ಮಾಡದ ಈ ಅನಾಹುತ ತಪ್ಪಿಸಲಿಕ್ಕೆ ಏನಾರ ಉಪಾಯ ಮಾಡ್ರಿ. ಆ ಹುಡುಗೀನ ಪಾರು ಮಾಡ್ರಿ.

ಗಣಪತಿ : ಆತು ಆತು ತಥಾಸ್ತು. (ಗಣಪತಿ ಗೊಂಬೆ ಒಂದು ಬದಿಯಿಂದ ಕೂಗಿ ಕೇಕೆ ಹಾಕಿ ಆ ಮೇಸ್ತ್ರಿಯನ್ನು ಸಾಹುಕಾರನನ್ನು ಹೊಡೆದು ಅಟ್ಟಿಸಿಕೊಂಡು ಬರುತ್ತಾನೆ. ಒಂದು ಬದಿಯಲ್ಲಿ ಸಾಹುಕಾರ ಹಾಗೂ ಕಾರಕೂನ ಗೊಂಬೆ, ಕೆರಳಿದ ಗಣಪತಿ ಹಾಗೂ ಕಿಳ್ಳಿಕ್ಯಾತ ಇನ್ನೊಂದು ತುದಿಗೆ).

ಗಣಪತಿ : ಏನಲೆ ನಾನು ಸರಿಯಾದ ಸಮಯಕ್ಕೆ ಬಂದೆ ಛೋಲೋ ಆತು ಇಲ್ಲದಿದ್ರ ಆ ಮಗುವಿನ ಮಾನಾ ಹಾಳು ಮಾಡಿ ಬಿಡತಿದ್ರಿ.

ಸಾವಕಾರ : ಸ್ವಾಮಿ ನಾ ಆ ಮಗುವಿನ ಮಾನಕ್ಕ ಕೈ ಹಾಕಿಲ್ಲ. ನಾ ಏನಿದ್ರೂ ಕಡಿಮೆ ಕೂಲಿ ಆಳು ಕೈಲಿ ಕೆಲಸಾ ಮಾಡಿಸಿಕೊಳ್ಳೊದೊಂದೇ ನನ್ನ ಕೆಲಸ.

ಗಣಪತಿ : ಅದು ಅಪರಾಧ ಅಂತ ನಿನಗ ಗೊತ್ತಿಲ್ಲ?

ಕಿಳ್ಳಿಕ್ಯಾತ : ಯಾಕ ಗೊತ್ತಿಲ್ರಿ, ಕಳೆದ ತಿಂಗಳ ಇದ ಸಾವಕಾರನ ಬಾಲಕಾರ್ಮಿಕ ನಿರ್ಮೂಲನ ಪದ್ಧತಿ ಕನೂನು 1986 ಸೆಕ್ಷನ್ 3ರ ಪ್ರಕಾರ ಬಿಲ್ಡಿಂಗ್ ಕಟ್ಟಲಿಕ್ಕೆ ಮಕ್ಕಳನ್ನ ಕೂಲಿಗೆ ಹಚ್ಚಿದ್ದಕ್ಕ ದಂಡ ಹಾಕಿ, ಶಿಕ್ಷಾ ಕೊಟ್ಟು ಹಂಗ ಈ ಪದ್ಧತಿ ಮುಂದುವರೆಸಿದ್ರ ಉಗ್ರ ಶಿಕ್ಷಾನೂ ಕೊಡೋದಾಗಿ ಎಚ್ಚರಿಕೆ ಕೊಟ್ಟಾರ್ರಿ ಅಧಿಕಾರಿಗಳು. ಈತ ತಪ್ಪಾತು ಅಂತ ಹೇಳಿ ಮುಂದ ಹೀಂಗ ಮಾಡಾಂಗಿಲ್ಲ ಅಂತ ಮುಚ್ಚಳಿಕೆನೂ ಬರದ ಕೊಟ್ಟಾನ್ರಿ. ಈಗ ಮತ್ತ ನಾಚಿಕೆಲ್ಲದ ಈ ಕೆಲಸಕ್ಕೆ ಕೈ ಹಾಕ್ಯಾನ.

ಗಣಪತಿ : ಭಕ್ತಾ ಈ ಶೆಟ್ಟಿಗೆ ಈ ಸರ್ತೆ ಮಾತ್ರ ದಂಡಾ ಉಗ್ರ ಶಿಕ್ಷಾ ಎರಡೂ ಆಗಲಿ. ನಾನೇ ಶಿಕ್ಷೆ ಕೊಡ್ತೇನೆ.

ಕಿಳ್ಳಿಕ್ಯಾತ : ಏ .... ಏ . . . ನೀನು ಶಿಕ್ಷೆ ಕೊಡೋದು ಬ್ಯಾಡಪ್ಪ, ನೀ ಎಚ್ಚರಿಕೆ ಕೊಡು, ಸದ್ಬುದ್ಧಿ ಕೊಡು ಸಾಕು. ನಮ್ಮ ನಾಡಿನಲ್ಲಿ ಕೋರ್ಟು, ಕಛೇರಿಗಳು ಇವೆ. ಅವರಿಗೆ ಈ ಶೆಟ್ಟೀನ ಒಪ್ಪಿಸೋಣ.

ಗಣಪತಿ : ಈ ಕೋರ್ಟಿನಲ್ಲಿ ಬಾಲ ಕಾರ್ಮಿಕರನ್ನಾಗಿ ಮಕ್ಕಳ ದುಡಿಸಿಕೊಳ್ಳೋರಿಗೆ ಏನೇನು ಮಹಾ ಶಿಕ್ಷೆ ಕೊಡ್ತಾರಪ್ಪ ಅದರಿಂದ ಆ ಹೆಣ್ಣು ಮಗೂಗೆ ಏನು ಲಾಭ?



ಕಿಳ್ಳಿಕ್ಯಾತ : ಗಣಪ ನೀನು ಸ್ವಲ್ಪ ಸಾವಧಾನದಿಂದ ಆಲಿಸು. ಇಂತಹ ಸಾವಕಾರ, ಮೇಸ್ತ್ರಿಯವರಿಗೆ, ದಂಡದ ರೂಪದಲ್ಲಿ ತಕ್ಷಣ 25,000 ರೂ.ಗಳನ್ನು ಮಗುವಿನ ಕಲ್ಯಾಣಕ್ಕೆ ಅಂತ ದಂಡ ಕಟ್ಟಿಸಿಕೊಂಡು, ಆ ಮಗುವಿಗೆ ತಕ್ಷಣ ಬೇಕಾದ ಎಲ್ಲಾ ಸೌಕರ್ಯ ಮಾಡ್ತಾರೆ. ಮತ್ತು ಅವರ ಮೇಲೆ ಕ್ರಿಮಿನಲ್ ಕೇಸ್ ಹಾಕಿ ಅವರನ್ನು ಕಠಿಣ ಶಿಕ್ಷೆಗೆ ಒಳಪಡಿಸುತ್ತಾರೆ. ಹಂಗಾಗಿ ನೀನೇನು ಆಯುಧ ಎತ್ತಿ ಹೋರಾಡಿ ಕೊಲ್ಲಬೇಕಾದ ಅವಶ್ಯಕತೆ ಇಲ್ಲ.

ಗಣಪತಿ : ಪರವಾಗಿಲ್ಲ, ಕಣಯ್ಯ ಕಾನೂನು ಇಷ್ಟು ಉಗ್ರವಾಗಿದ್ದರೂ ಮನುಷ್ಯನ ಆಶೆಗೆ ದುಷ್ಟತನಕ್ಕೆ ಮಿತಿ ಇಲ್ಲ ನೋಡು.

**ಕಿಳ್ಳಿಕ್ಯಾತ :** ಅಷ್ಟ ಅಲ್ಲರಿ. ಮಕ್ಕಳು ಕೆಲಸ ಮಾಡೋದ್ರಿಂದ ಅಶಿಕ್ಷಿತರ ಜನಸಂಖ್ಯಾ ಬೆಳೀತದ, ದೊಡ್ಡವರಿಗೆ ಕೆಲಸಾ ಸಿಗದ ಕೆಟ್ಟ ಕೆಲಸಕ್ಕೆ ಅವರು ಮುಂದಾಗ್ತಾರ ಅನ್ನೋ ಖಬರೂ ಈ ಜನಕ್ಕ ಇಲ್ಲ ನೋಡ್ರಿ.

**ಗಣಪತಿ :** ಬಹಳ ಜ್ಞಾನೋದಯದ ಮಾತು ಹೇಳಿದೆ.

**ಕಿಳ್ಳಿಕ್ಯಾತ :** ನೋಡಪಾ ಭಗವಂತಾ ನಿನಗೇ ಜ್ಞಾನೋದಯ ಮಾಡಿಸುವಷ್ಟು ನಾವು ಮುಂದುವರೆದಿಲ್ಲ. ನಮ್ಮ ಭೂಲೋಕದಲ್ಲಂತೂ ಮಕ್ಕಳಿಗೆ ಹಕ್ಕುಗಳನ್ನು ಕೊಟ್ಟಿದ್ದೇವೆ. ಅದನ್ನೆಲ್ಲ ಓದಿ ತಿಳಿದುಕೊಂಡು, ನಿಮ್ಮ ನಾಡಿನಲ್ಲಿ ಬಾಲಕಾರ್ಮಿಕ ಪದ್ಧತಿ ಇದ್ದರೆ ಅವರಿಗೂ ತಿಳಿಸಿ ಹೇಳು. ಮಕ್ಕಳು ದುಡಿಮೆಗೆ ತೊಡಗಿದರೆ ನಾಡಿನ ಅನೇಕ ಸಂಪನ್ಮೂಲ ವ್ಯಕ್ತಿಗಳನ್ನು ನಾಡು ಕಳೆದುಕೊಳ್ಳುತ್ತೆ. ಬೌದ್ಧಿಕ ಆಸ್ತಿ ನಾಶವಾಗುತ್ತೆ. ಬಾಲಕಾರ್ಮಿಕರಿರುವ ನಾಡು ನರಕವಾಗುತ್ತೆ.

**ಗಣಪತಿ :** ಅಲ್ಲಪಾ ಕಿಳ್ಳಿಕ್ಯಾತ ನಿನ್ನ ಮಾತು ಕೇಳಿ ಆ ಶೆಟ್ಟಿ, ಕಾರಕೂನ ಮತ್ತ ಆತನ ಬಾಲಂಗೋಸಿಗೆ ಶಿಕ್ಷಾ ಕೊಟ್ಟೆ, ಖರೆ. ಆದ್ರಿಂದ ಸಮಸ್ಯೆಯ ಪರಿಹಾರ ಅರ್ಧ ಆದ್ಹಾಂಗಾತು ಅಂತ ನನ್ನ ಅಂಬೋಣ.

**ಕಿಳ್ಳಿಕ್ಯಾತ :** ಅದ್ಹ್ಯಾಂಗ್ರಿ?

**ಗಣಪತಿ :** ಮಕ್ಕಳನ್ನ ಬಾಲಕಾರ್ಮಿಕರನ್ನಾಗಿ ದುಡಿಸಿಕೊಳ್ಳುವುದು ಎಷ್ಟು ಅಪರದವ್ರೋ, ಹಾಗೆ ಅವರನ್ನ ಕೆಲಸಕ್ಕೆ ಹಚ್ಚೋ ಆ ಮಕ್ಕಳ ಪಾಲಕರೂ ಅಪರಾಧಿಗಳೂ ಅಂತ ನನ್ನ ಭಾವನೆ.

**ಕಿಳ್ಳಿಕ್ಯಾತ :** ಭಗವಂತ ನಿನ್ನದು ದೂರದೃಷ್ಟಿ, ಪರಿಸ್ಥಿತಿಯ ಒತ್ತಡಕ್ಕೆ ಮಣಿದು ಬಡಪಾಲಕರು ತಮ್ಮ ಮಕ್ಕಳನ್ನ ದುಡೀಲಿಕ್ಕೆ ಹಚ್ಚತಾರ ಅಂತ ನಮ್ಮ ತಿಳಿವಳಿಕೆ.

**ಗಣಪತಿ :** ಬಡತನ ಕೇವಲ ನೆಪಮಾತ್ರ ಪಾಲಕರ ಅನಕ್ಷರತೆ, ಕುಡಿತ, ಕಾನೂನಿನ ಬಗ್ಗೆ ಅವರ ಅರಿವು, ಹಾಗೂ ಅವರ ದುರಾಸೆ ಕೂಡ! ಪಾಪ, ಮಕ್ಕಳ ಮೇಲೆ ಪರಿಣಾಮ ಬೀರುತ್ತೆ. ಅದಕ್ಕೆ ಅವರಿಗೂ ಶಿಕ್ಷಣದ ಮಹತ್ವ ತಿಳಿ ಹೇಳಬೇಕು. ಎಲ್ಲಿ, ನಿನ್ನ ನಾಟಕದ ಆ ಮೇಸ್ತ್ರೀನ್ನ ಕರಿ. ಆತನ ಮಗಳು ಬಾಲಕಾರ್ಮಿಕ ಪದ್ಧತಿಗೆ ಬಲಿಯಾಗಲು ಪರೋಕ್ಷವಾಗಿ ಪ್ರಚೋದನೆ ನೀಡಿದ ಅಪರಾಧಿ ಆತ, ಆತನಿಗೂ ಮುಂದೆ ಈ ಅಪರಾಧ ಮಾಡದಂತೆ ತಿಳಿಹೇಳು.

**ಕಿಳ್ಳಿಕ್ಯಾತ :** ಹಾಗೆ ಆಗಲಿ, ಏ ಶರಣಪ್ಪಾ ರಂಗಕ್ಕೆ ಬಾರಪ್ಪಾ.

**ಶರಣಪ್ಪಾ :** ಬಂದೆ ಸ್ವಾಮಿ

**ಕಿಳ್ಳಿಕ್ಯಾತ :** ತಿಳಿತೇನೋ ನೀನು ನಿನ್ನ ಮಗಳು ಅಪಾಯದಲ್ಲಿ ಸಿಲುಕಲು ಪರೋಕ್ಷವಾಗಿ ಮಾಡಿಕೊಟ್ಟ ಅಪರಾಧಿ, ಮುಂದೆ ಹೀಗಾಗದಂತೆ ಎಚ್ಚರವಹಿಸು!

**ಶರಣಪ್ಪ ಮೇಸ್ತ್ರೀ :** ಹಾಗೇ ಆಗಲ್ರಿ.

**ಕಿಳ್ಳಿಕ್ಯಾತ :** ಭಗವಂತ ನಿನ್ನ ಲೀಲೆ ದೊಡ್ಡದು. ನೀನು ಅಪ್ಪಣೆ ಕೊಟ್ಟರೆ ಇಲ್ಲಿ ನೆರೆದ ಪ್ರೇಕ್ಷಕರಿಗೆ ಬಾಲಕಾರ್ಮಿಕತೆ ಎಂಬ ಪದ್ಧತಿ ಬಗ್ಗೆ ಇನ್ನಷ್ಟು ತಿಳಿ ಹೇಳ್ತೆನೆ.

**ಗಣಪತಿ :** ಹಾಗೇ ಆಗಲಿ, ಉತ್ತಮ ವಿಚಾರ ಹೇಳೋಕೆ ಯಾರ ಅಪ್ಪಣೆಯೂ ಬೇಕಾಗಿಲ್ಲ ತಥಾಸ್ತು!

**ಕಿಳ್ಳಿಕ್ಯಾತ :** ಇಲ್ಲಿ ನೆರೆದಿರುವಂತ ಅಣ್ಣ-ತಮ್ಮಂದಿರೆ, ಅಕ್ಕ-ತಂಗಿಯರೇ, ಮಕ್ಕಳೇ ಹಾಗೂ ಸಮಸ್ತ ಕಲಾ ಪ್ರೇಮಿಗಳೇ, ಒಬ್ಬ ಕವಿ ಹೇಳ್ತಾನೆ ಮಕ್ಕಳೆಂದರೆ ದೇವರು ಕಳುಹಿಸಿದ ಒಲವಿನ ಪತ್ರಗಳು, ಅಂತ, ಮಕ್ಕಳಲ್ಲಿ ಭೇದ ಭಾವ ಇಲ್ಲ. ಒಂದು ಮಗುವಿನ ಹುಟ್ಟು ಅದು ಆಕಸ್ಮಿಕ ಘಟನೆ, ಬಡವ-ಶ್ರೀಮಂತ, ಮೇಲ್ಜಾತಿ-ಕೀಳ್ಜಾತಿ, ಗಂಡು, ಹೆಣ್ಣು, ಹಳ್ಳಿಮಗು-ದಿಲ್ಲಿಮಗು ಅಂತ ವ್ಯತ್ಯಾಸ ಇರೋದಿಲ್ಲ. ಎಲ್ಲಾ ಮಕ್ಕಳಿಗೂ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡಬೇಕಾದದ್ದು ಈ ಸಮಾಜದ ಜವಾಬ್ದಾರಿ. ನಮ್ಮ ನಿಮ್ಮೆಲ್ಲರ ಹೊಣೆ. ಆ ಮಗುವಿಗೆ, ಶಿಕ್ಷಣ, ಆರೋಗ್ಯ, ರಕ್ಷಣೆ ಇತ್ಯಾದಿ ಮೂಲಭೂತ ಸೌಲಭ್ಯಗಳನ್ನು ಕೊಡಬೇಕು. ಈ ಕಥೆಯಿಂದ ದುಷ್ಪರಿಣಾಮಗಳ ಬಗ್ಗೆ ತಮಗೆ ಕಿಂಚಿತ್ತಾದರೂ ಅರಿವು ಮೂಡಿದ್ದರೂ ನಮ್ಮ ಶ್ರಮ ಸಾರ್ಥಕ. ಬನ್ನಿ ನಮಗೆ ಬಾಲಕಾರ್ಮಿಕ ಪದ್ಧತಿಯನ್ನು ನಿರ್ಮೂಲನೆ ಮಾಡಲು ಶಕ್ತಿ, ಸದ್ಬುದ್ಧಿ ಕೊಡು ಎಂದು ಈ ಬಾಲ ವಿಘ್ನೇಶನನ್ನು ಪ್ರಾರ್ಥಿಸೋಣ.





## ಹಾಡು

ಸಕಲ ವಿಘ್ನಗಳ ನೀ ಪರಿಹರಿಸು ವಿಘ್ನೇಶ
ಭೂಮಿಯ ಮೇಲಿನ ಬಾಲಕರ ಶೋಷಣೆ
ನೀ ಬುಡ ಸಹಿತ ನಿರ್ಮೂಲನೆ ಮಾಡು ನೀ ಸರ್ವೇಶ
ಜಯ ಜಯ ಜಯ ಶ್ರೀ ಗಣೇಶ
ಶ್ರೀ ಗಣೇಶ . . . . . . . . . . . . . .

* * * * ಮುಕ್ತಾಯ * * * *

## ಪ್ರದರ್ಶನದ ನಂತರ ಚರ್ಚೆಗೆ ಎತ್ತಿಕೊಳ್ಳಬಹುದಾದ ಪ್ರಶ್ನೆಗಳು:

೧) ಅತೀವೃಷ್ಠಿ ಹಾಗೂ ಅನಾವೃಷ್ಠಿಯಿಂದ ರೈತಾಪಿ ಜನರು ತಮ್ಮ ಪ್ರದೇಶದಿಂದ ವಲಸೆ ಹೋಗುವುದು ಅನಿವಾರ್ಯವಾದಲ್ಲಿ ಅವರು ಯಾವ ರೀತಿ ವಲಸೆ ಹೋದ ಪ್ರದೇಶದಲ್ಲಿ ಜೀವನ ಸಾಗಿಸುತ್ತಾರೆ. ಅವರ ಶೋಷಣೆಗೆ ಪರಿಹಾರವೇನು?

೨) ಹಳ್ಳಿಯಲ್ಲಿದ್ದ ಶಾಲೆಗಳನ್ನು ರೈತಾಪಿ ಜನ ಸಮರ್ಥವಾಗಿ ಉಪಯೋಗಿಸುತ್ತಿದ್ದಾರೆಯೇ?

೩) ಬಾಲಕಾರ್ಮಿಕ ಪದ್ಧತಿ ಕುರಿತು ಕಾನೂನು ಏನು ಹೇಳುತ್ತದೆ? ಅದರ ಅರಿವು ಜನರಿಗೆ ಸಮರ್ಪಕವಾಗಿ ಆಗುತ್ತಿದೆಯೇ?

೪) ಬಾಲಕಾರ್ಮಿಕ ಪದ್ಧತಿಯಲ್ಲಿ ಲೈಂಗಿಕ ಶೋಷಣೆ ಸರ್ವೇ ಸಾಮಾನ್ಯವಾಗಿದ್ದು ಅದರ ಬಗ್ಗೆ ಎಚ್ಚರಿಕೆ ಕ್ರಮ ಕೈಕೊಳ್ಳುವ ಮಾರ್ಗಗಳು.

# 1.2 ರಾಮ-ರಹೀಮರು ಕಂಡ ಬೆಳಕು

ತೊಗಲು ಗೊಂಬೆಯಾಟ ಅಥವಾ ನೆರಳು ಗೊಂಬೆಯಾಟ
(The Light that Ram and Rahim saw: A Leather Shadow Puppet Play)



| | | |
|---|---|---|
| ನಾಟಕ ರಚನೆ | : | ಡಾ. ಪ್ರಕಾಶ ಗರೂಡ |
| ಗೊಂಬೆಗಳ ರಚನೆ | : | ಕವಿತಾ ಹೆಗಡೆ, ರಜನಿ ಗರೂಡ |
| ಸಂಗೀತ | : | ನಾಗರಾಜ ಹೆಗಡೆ |
| ಅವಧಿ | : | ೨೫ ನಿಮಿಷ |

# ಪಾತ್ರ ಪರಿಚಯ



1) **ಫಕೀರ** : ಮುಸ್ಲಿಂ ಸೂಫಿ ಮಾದರಿಯ ಸಂತ ಒಂದು ಹಸಿರು ಅಂಗಿ, ತಲೆಗೆ ಕಪ್ಪು ಅಥವಾ ಕೆಂಪು ರುಮಾಲು, ಕೊರಳಲ್ಲಿ ಕಲ್ಲು ಹರಳಿನ ಸರ ಚೌಕಡಿಲುಂಗಿ, ಬಗಲಲ್ಲಿ ಜೋಳಿಗೆ.



2) **ಸಂತ** : ರುಮಾಲು ಧೋತರ, ಜೋಳಿಗೆ, ಫಂಡರಾಪುರದ ಸಂತರ ಮಾದರಿ ಅಥವಾ ಗೊಂದಲಿಗೇರರ ಮಾದರಿಯ ವೇಷ.



3) **ರಹೀಮ**: ಮುಸ್ಲಿಂ ಹುಡುಗ ವಯಸ್ಸು 10-12 ದುಂಡಾದ ಮುಸ್ಲಿಂ ಮಾದರಿ ಕ್ಯಾಮು ಬಗಲಲ್ಲಿ ಪಾಟೀಚೀಲವನ್ನೂ ಉಪಯೋಗಿಸಬಹುದು.



4) **ರಾಮು** : ಹಿಂದು ಹುಡುಗ ವಯಸ್ಸು 10-12. ಹಾಫ್ ಪ್ಯಾಂಟು ಶರ್ಟು, ಬಗಲಲ್ಲಿ ಪಾಟೀಚೀಲ. (ಪಾಟೀಚೀಲದ ಚಿತ್ರವನ್ನು ಪ್ರತ್ಯೇಕವಾಗಿ ಚಿಕ್ಕದಾಗಿ ಬಿಡಿಸಿ ಸಂದರ್ಭಾನುಸಾರ ಬಳಸಿಕೊಳ್ಳಬಹುದು).



5) **ಈಶ್ವರಪ್ಪ** : ವಯಸ್ಸು 40-45 ಹಳ್ಳಿ ರೈತ



6) **ಗೌಡ** : ವಯಸ್ಸು 40-45 ಶ್ರೀಮಂತ, ಧೋತರ ರುಮಾಲು



7) **ಗೌಡರ ಮಗ** : ವಯಸ್ಸು 10-12 ಕಾನ್‌ವೆಂಟ್ ಡ್ರಸ್



8) **ಬಡೇಮಿಯಾಂ** : ವಯಸ್ಸು 40-45 ಗೌಂಡಿ ಕೆಲಸದವ, ಟೊಪ್ಪಿಗೆ, ನೆಹರು ಶರ್ಟು,ಪೈಜಾಮ.



9) **ಗ್ಯಾರೇಜ್ ಮೇಸ್ತ್ರಿ** : ನೀಲಿ ಶರ್ಟು ಪ್ಯಾಂಟು, ಕೈಯಲ್ಲಿ ಒಂದು ಸ್ಪ್ಯಾನರ್:

# ಹಿನ್ನೆಲೆ ರಂಗಸಜ್ಜಿಕೆಯ ಚಿತ್ರಗಳು

1. ಶಾಲೆ
2. ಟಿ.ವಿ.
3. ಗೌಡರ ಮನೆ
4. ಗ್ಯಾರೇಜ್ ಬೋರ್ಡು ಅಥವಾ ಒಂದು ಕಾರ್ಡ ಬೋರ್ಡು ಬಳಸಬಹುದು.

   ಹಿನ್ನೆಲೆಯಲ್ಲಿ ಬರುವ ರಂಗಸಜ್ಜಿಕೆಯ ಚಿತ್ರಗಳನ್ನು ಕ್ಯಾನವಾಸ್ ಬಟ್ಟೆಯ ಮೇಲೂ ಬಿಡಿಸಬಹುದು.

# ರಂಗ ಸಜ್ಜಿಕೆ ಮತ್ತು ಪ್ರಯೋಗ

ಈ ಆಟವೂ ತೊಗಲು ಗೊಂಬೆ ಆಟವಾಗಿದ್ದು, 'ಗೊಂಬೆ ಗಣೇಶನ ನ್ಯಾಯ' ಈ ತೊಗಲು ಗೊಂಬೆ ಆಟದ ಕಥೆಯ ರೀತಿಯ ರಂಗಸಜ್ಜಿಕೆ ತಂತ್ರ, ಪ್ರಸ್ತುತಿ ಮತ್ತು ಪ್ರಯೋಗ ಮಾಡಿಕೊಳ್ಳಬೇಕು.

# ಸಂಗೀತ ಮತ್ತು ಹಾಡು

'ಗೊಂಬೆ ಗಣೇಶನ ನ್ಯಾಯ' ಈ ಗೊಂಬೆ ಆಟದ ರೀತಿಯಲ್ಲೇ ಇದ್ದು,
ಈ ಕಥೆಯ ಭಾವಕ್ಕೆ ತಕ್ಕಂತೆ ಸಂಗೀತ ಸಂಯೋಜನೆಯನ್ನೂ ಮಾಡಿಕೊಳ್ಳಬೇಕು.
ಸೂಫಿ ಹಾಗೂ ಸಂತರ ಪದಗಳ ಧುನ್‌ಗಳನ್ನು ಕಥೆಗೆ ಪೂರಕವಾಗಿ ಬಳಸಿಕೊಳ್ಳಬಹುದು.







## ದೃಶ್ಯ ೧

(ಬಿಳಿಪರದೆ, ಒಂದು ಕಡೆಯಿಂದ ಚಚ್ಚೌಕಾಕಾರದ ಕಂದು ಬಣ್ಣದಲುಂಗಿ ಹಸಿರು ಶರಟು ಹಾಗೆ ಒಂದು ಕರಿ ಅರ್ಧ ತೋಳಿನ ಕೋಟು ತಲೆಗೆ ರುಮಾಲು ಕೈಯಲ್ಲಿ ಉದ್ದನೆಯ ಕಬ್ಬಿಣದ ಸರಳುಗಳ ಒಂದು ಜೋಡು ಪಟ್ಟ ಹಿಡಿದ ಗಡ್ಡಧಾರಿ ಮುಸ್ಲಿಂ ಸಂತ ಹಾಡುತ್ತಾ ಬರುತ್ತಾನೆ. ಇನ್ನೊಂದು ಕಡೆಯಿಂದ ಮರಾಠಿ ಶೈಲಿಯ ಪಗಡಿ ತೊಟ್ಟ ಸಂತನೊಬ್ಬ ಪ್ರವೇಶಿಸುತ್ತಾನೆ. ಆತನ ಕೈಯಲ್ಲಿ ಏಕತಾರಿ ಇದೆ ಇಬ್ಬರೂ ಹಾಡುತ್ತಾ ಬರುತ್ತಾರೆ.)



### ಹಾಡು

ಫಕೀರ : (ರಿಬಾಯತ್ ಲಾವಣಿ ಧಾಟಿ)

ಹೇ ಮೊದಲಿಗೆ ಅಲ್ಲಮ ಪ್ರಭುವಿಗೆ
ಆತನ ಸದ್ಗುರುವಿಗೆ ಮಾಡುವೆನು ನಾನು ಸಲಾಂ
ಪ್ರೀತಿವಂತ ಮಹಬೂಬು ಸ್ವಂತ ಅವರ ಪಾದಕ್ಕೆ ಸಲಾಂ
ಪ್ರೀತಿವಂತ ಮಹಬೂಬು ಸ್ವಂತ ಅವರ ಪಾದಕ್ಕೆ ಸಲಾಂ
ಗುರು ಮಹಮ್ಮದವರಿಗೆ ಆತನ ಸದರಿಗೆ ಶಿರಬಾಗಿ ಮಾಡುವೆ ಸಲಾಂ

(ಈ ಧಾಟಿಗೆ ತಕ್ಕಂತೆ ಅದನ್ನೇ ನಿಧಾನವಾಗಿ ಬ್ಲೆಂಡ್ ಮಾಡಿ ತಾಳ ಢೋಲಕಿಗೆ ಹೊಂದುವ ಒಂದು ತತ್ವದ ಪದ ಆರಂಭವಾಗಬೇಕು)

ಸಂತ :

### ಹಾಡು



ನಗೆಯು ಬರುತಿದೆ ಎನಗೆ ನಗೆಯು ಬರುತಿದೆ
ಓ ರಾಮ ನಗೆಯು ಬರುತಿದೆ ಓ ದೇವಾ, ಓ ಸ್ವಾಮಿ
ನಗೆಯು ಬರುತಿದೆ ಎನಗೆ ನಗೆಯು ಬರುತಿದೆ, ಜಗದೊಳಿರುವ
ಜಾಣರೆಲ್ಲಾ ಹಗರಣ ಮಾಡುವುದು ಕಂಡು ನಗೆಯು ಬರುತಿದೆ.
ಓ ರಾಮಾ ನಗೆಯು ಬರುತಿದೆ, ಹೀನ ಗುಣವ ಮನದೊಳಿಟ್ಟ
ತಾನು ಈಶ ಪುಂಜವಾಗಿ ಮೌನಿ ಪುರಂಧರ ವಿಠಲನನ್ನು ಧ್ಯಾನ
ಮಾಡುವುದು ಕಂಡು ನಗೆಯು ಬರುತಿದೆ.

ಫಕೀರ : ಮೊದಲಿಗೆ ಅಲ್ಲಾಗೆ ಸಲಾಂ ಮಾಡಿ ಕೂಡಿಕುಂತ ಜನಕ್ಕೆ ಕೈಮುಗಿದು ನಮ್ಮ ಮುಂದಿನ ಈ ತೊಗಲು ಗೊಂಬೆ ಆಟಕ್ಕೆ ಸ್ವಾಗತಾ ಮಾಡ್ತೇವೆ.

ಸಂತ : ನಮ್ಮ ದೇಶದ ಸಂಸ್ಕೃತಿ ಭಾಳ ದೊಡ್ಡದು. ಇಲ್ಲಿ ಹಿಂದು, ಮುಸ್ಲಿಂ, ಸಿಖ್, ಇಸಾಯಿ ಎಲ್ಲಾ ಧರ್ಮದವರೂ ಕೂಡಿ ಬಾಳೆ ಮಾಡ್ತಾರೆ, ಅದಕ್ಕ ಇಡೀ ಜಗತ್ತಿನ್ಯಾಗ ನಮ್ಮ ಹಿಂದುಸ್ಥಾನಕ್ಕ ವಿಶಿಷ್ಠ ಸ್ಥಾನ ಅದ.

ಫಕೀರ : ಇಂಥಾ ಸಹಬಾಳ್ವೆ ಉಳ್ಳ ದೇಶದಾಗ ಕರ್ನಾಟಕದ ಒಂದು ಮೂಲೆಯಲ್ಲಿರುವ ಪುಟ್ಟ ಹಳ್ಳಿ ನರಸಾಪುರ.

ಸಂತ : ಆ ನರಸಾಪುರದಾಗ ರಾಮು-ರಹೀಮ ಅಂತ ಇಬ್ಬರು ಮಕ್ಕಳು.

ಫಕೀರ : ಅವರಿಬ್ಬರೂ ಜಿಗ್ರಿ ದೋಸ್ತಿಗಳೂ, ಯಾಕಂದ್ರ ಅವರಿಬ್ಬರೂ ಒಂದ ಸಾಲ್ಯಾಗ ಓದತ್ತಿದ್ದರು. ಒಂದ ಓಣ್ಯಾಗ ಅವರ ಮನಿ ಇತ್ತು.

ಸಂತ : ರಾಮನ ಅಪ್ಪ ಈಶಪ್ಪ ಸಣ್ಣ ರೈತ, ಒಂದೆಕರೆ ಜಮೀನ್ದಾಗ ಹತ್ತಿ, ಶೇಂಗಾ, ಜ್ವಾಳಾ ಅಂತ ಬೆಳಕೊಂಡು ತನ್ನ ಪುಟ್ಟ ಸಂಸಾರ ನಡಸ್ತಿದ್ದಾ. ಅವನ ಹೆಂಡತಿ ಗೌರಮ್ಮನೂ ಹೊಲದಾಗ ದುಡೀತಿದ್ಲು. ರಾಮನ ಅಕ್ಕ ಮನಿಗೆಲಸಾನೂ ಮಾಡ್ತಿದ್ಲು, ಹೊಲಕ್ಕೂ ಹೋಗ್ತಿದ್ಲು, ಆಕೀನ್ನು ಸಾಲಿಗೆ ಕಳಸಬೇಕಂತ ಈಶ್ವರಪ್ಪ ಎಷ್ಟು ಸರ್ತಿ ಪ್ರಯತ್ನಿಸಿದರೂ 'ಹೆಂಗಸರು ಸಾಲಿಗೆ ಹೋಗೋದು ಸರಿ ಅಲ್ಲ' ಅಂತ ಆತನ ಹೆಂಡತಿ ಹಟಾ, ಹೀಗಾಗಿ ಮನ್ಯಾಗ ಒಂದೊಂದು ಸರ್ತಿ ಗಂಡಾ ಹೆಂಡತಿಗೆ ಝುಟಾಪಟಿ ಆಗ್ತಿತ್ತು.

ಫಕೀರ : ಇನ್ನು ನಮ್ಮ ರಹೀಮನ ಅಪ್ಪಾ ಬಡೇಮಿಯಾ ಗೌಂಡಿ ಕೆಲಸಾ ಮಾಡ್ತಿದ್ದು, ಅಂವಂದು ದೊಡ್ಡ ಸಂಸಾರ. ಆತನಿಗೆ ಐದು ಮಂದಿ ಮಕ್ಕಳು. ಎರಡು ಹೆಣ್ಣು, ಮೂರು ಗಂಡು. ಅದ್ರಾಗ ಸಾಯಿರಾ ದೊಡ್ಡಾಕಿ. ಈಗಾಗಲೇ ಆಕೆಗೆ 15 ವರ್ಷ, ಸಣ್ಣಾಕಿ ಜಹೀರಾಗ ೧೩ ವರ್ಷ ಮತ್ತ ಮೂರನೇಯವ ನಮ್ಮ ರಹೀಮಗ ವರ್ಷ 12. ಇನ್ನು ಉಳಿದ ಎರಡೂ ಮಕ್ಕಳೂ ಬಾಳ ಸಣ್ಣವೂ. ನಮ್ಮ ಬಡೇಮಿಯಾಂಗ ರಹೀಮ ಹುಟ್ಟಿದಾಗ ನಾ ಒಂದು ಸಲಾ ಅವನ ಮನಿಗೆ ಹೋಗಿ, 'ಮಿಂಯಾ ಕಾಲ ಬದ್ಲಾಗೇದ ನಿನ್ನ ಸಂಸಾರ ಸುಖಕ್ಕ ಅಲ್‌ವಿದಾ ಹೇಳು ಅಂದ್ರ ಬಾಬಾ ಏನ ಹೇಳಿದ ಗೊತ್ತಾ,



ಸಂತ : ಏನ್ ಹೇಳಿದ?

ಫಕೀರ : 'ಕೊಡೊ ಅಲ್ಲಾ ದೊಡ್ಡವಾ' ಅಂದಾ. ಮುಂದ ಎರಡ ವರ್ಷದಾಗ ಇನ್ನೆರಡು ಗಂಡು ಮಕ್ಕಳನ್ನ ಆತನ ಬೀಬಿ ಹಡದು ಕುಂತ್ಲು. ಅದೇನ ಇರಲಿ ಮನಸ್ಸಲೆ ಭಾಳ ಛೊಲೋ ನಮ್ಮ ಬಡೆಮಿಯಾಂ. ಸ್ವತಃ ಇಂಥಾ ಎರಡು ಬಡಕುಟುಂಬಗಳ ದರ್ದಭರಿ ಕ'ಹಾನಿಯೊಳಗೆ ಒಂದು ಆಶಾಕಿರಣ ಹೊರಡಿಸಿದವರು ನಮ್ಮ ಈ ಕಥಿಯ ಮುಖ್ಯ ಪಾತ್ರಗಳಾದ ರಾಮ–ರಹೀಮರು. ಅವರು ಕೂಡಿ ಸಾಲಿ ಕಲಿಯೋ ಹಟದಿಂದನ ಆ ಊರಿಗೆ ಬೆಳಕ ನೀಡೋ ಭರವಸೆ ಹುಟ್ಟಿಸಿದೋರು. ಅವರ ಸಣ್ಣ ಕಹಾನಿ ನೋಡೋಣ ಬನ್ನಿ.

**(ಶಾಲೆಯ ಗಂಟೆ ಬಾರಿಸುತ್ತದೆ ಹುಡುಗರು ಹೋ ಅಂತ ಧ್ವನಿ ಬರುತ್ತದೆ. ರಾಮ ರಹೀಮರ ಗೊಂಬೆ ಪ್ರವೇಶ).**

ರಹೀಮ : ಏ ರಾಮ ನಿನ್ನೆ ನೀನು ಶಾಲೆಗೆ ಯಾಕ ಬರಲಿಲ್ಲವೋ

ರಾಮ : ಏ ಬೆಳಿಗ್ಗೆ ಎದ್ದು ಬೇಗ ಜಳಕಾ ಮಾಡಿ ರೊಟ್ಟಿ ತಿಂದು ಸಾಲಿಗೆ ಹೊರಟಿದ್ನೆ, ಅಷ್ಟರಾಗ ಊರಗೌಡ್ರ ನಮ್ಮ ಮನಿಗೆ ಬಂದು ಅಪ್ಪನ ಹತ್ರ ಏನೇನೋ ಮಾತಾಡಿದರು. ಅವರ ಮಾತು ಮುಗಿಯೋದ್ರೊಳಗ ನಮ್ಮಪ್ಪ "ಲೇ ರಾಮ್ಯಾ ಇವೊತ್ತು ನೀ ಸಾಲಿಗೆ ಹೋಗೋದು ಬ್ಯಾಡ ಗೌಡ್ರ ಮನಿಗೆ ಹೋಗು" ಅಚಿದಾ.

ರಹೀಮ : ಯಾಕಂತ?

ರಾಮ : ನಾನೂ ನಮ್ಮಪ್ಪನ್ನ ಅದನ್ನು ಕೇಳಿದೆ. ಅದಕ್ಕ ನಮ್ಮಪ್ಪ ಅದೆಲ್ಲಾ ನಿನಗ್ಯಾಕ ಸುಮ್ಮನೆ ನಾ ಹೇಳಿದಷ್ಟು ಕೇಳು ಅಂದ.

ರಹೀಮ : ಗೌಡ್ರ ಮನಿಗಿ ಹೋಗಿ ಏನ ಮಾಡ್ದಿ.

ರಾಮು : ಅಲ್ಲೇನು ಮಾಡೋದು ಮಣ್ಣು, ದನಕ್ಕ ನೀರು ಕುಡಿಸು, ದನದಕ್ಕಿ ಸ್ವಚ್ಛ ಮಾಡು, ಶೆಗಣಿ ಎಲ್ಲಾ ಬಳದು ಗೊಬ್ಬರಕ್ಕ ಹಾಕು, ಇವ ಕೆಲಸ, ಅಪ್ಪಾ ಇವತ್ತೂ ಗೌಡ್ರ ಮನಿಗೆ ಹೋಗು ಕೆಲಸಕ್ಕ ಅಂದಾ ನಾ ಹಟಾ ಮಾಡಿ ಕೆಲಸಕ್ಕ ಹೋಗೋದಿಲ್ಲಾ ಸಾಲಿಗೆ ಹೋಗ್ತೀನಿ ಅಂತ ಹೇಳಿ ಓಡಿ ಬಂದೀನಿ. (ಅಷ್ಟರಲ್ಲಿ ಈಶ್ವರಪ್ಪನ ಪ್ರವೇಶ).

ಈಶ್ವರಪ್ಪ : ಲೇ ರಾಮು, ಗೌಡ್ರ ಮನಿಗೆ ಕೆಲಸಕ್ಕ ಹೋಗು ಅಂತ ಹೇಳಿದ್ದಿಲ್ಲಾ, ನಡಿ ಇವೊತ್ತಿನಿಂದ ನಿನ್ನ ಓದು ಬಂದ. (ರಾಮನನ್ನು ಎಳೆದುಕೊಂಡು ಹೋಗುತ್ತಾನೆ. ರಾಮು ಅಳುತ್ತಾನೆ. ರಹೀಮ ಗಾಬರಿಯಾಗಿದ್ದಾನೆ).

ರಹೀಮ : (ಸ್ವಗತ) ರಾಮು ಇನ್ನ ಮುಂದೆ ಶಾಲೆಗೆ ಬರೋದಿಲ್ಲ, ಅವರಪ್ಪ ಅವನ್ನ ಸಾಲಿ ಯಾಕ ಬಿಡಸ್ತಾನ ಈಗ ಹೋಗಿ ನಮ್ಮ ಅಬ್ಬಾಜಾನ್ ಹತ್ತಿರ ಕೇಳ್ತೀನಿ.

(ಫಕೀರ ಪ್ರವೇಶ)

ಫಕೀರ : ಈಶ್ವರಪ್ಪ ಗೌಡ್ರ ಹತ್ತಿರ ತನ್ನ ಜಮೀನಿನ ಸಲುವಾಗಿ ಭಾಳ ಸಾಲ ಮಾಡಿದ್ದ, ಕಳೆದ ಎರಡು ವರ್ಷದಿಂದ ಸರಿಯಾಗಿ ಮಳಿ ಆಗದೆ ಬೆಳಿ ಬಂದಿದ್ದಿಲ್ಲ, ತನ್ನ ದುಡಿಮಿ ಈಶ್ವರಪ್ಪಗ ತನ್ನ ಸಂಸಾರ ನಡಸೋ ಸಾಲ್ತಿದ್ದಿಲ್ಲ. ಅದ್ರಾಗ ಸಾಲಗಾರರ ಕಾಟ, ಮತ್ತ ಈ ವರ್ಷ ತನ್ನ ಹಿರೇಮಗಳ ಮದುವಿನೂ ಮಾಡೋ ವಿಚಾರಾನ ಆತನ ತಲಿ ಒಳಗ ಆತನ ಹೆಂಡತಿ ಗೌರಮ್ಮ ತುಂಬಿದ್ಲು. ಪಾಪ ರಾಮನ ಅಕ್ಕಾ ಲಕ್ಷ್ಮಿ ಇನ್ನೂ ಸಣ್ಣಾಕಿ ಆಗಿದ್ದರೂ ಆಕಿಗೆ ಲಗೂನ ಗಂಡನ ಹುಡುಕಿ ಲಗ್ನ ಮಾಡಿ ತಮ್ಮ ಜವಾಬ್ದಾರಿಯಿಂದ ಮುಕ್ತರಾಗೋ ಇಚ್ಛಾ ಅವರದಾಗಿತ್ತು. ಬಡತನದಿಂದ ಮಗಳ ಭವಿಷ್ಯದ ಬಗ್ಗೆ ಆತಂಕದಿಂದಾಗಿ ಮಗಳ ಮದುವಿ ಅವಸರದ ದಾರಿ ಆ ದಂಪತಿಗಳು ಹಿಡಿಯೋದ್ರಾಗಿದ್ರು.

ಸಂತ : ಹಿರಿಯರು ತಾವು ಮಾಡಿದ ಸಾಲಾ ಮುಟ್ಟಿಸಲಿಕ್ಕೆ ಮಕ್ಕಳನ್ನ ಶ್ರೀಮಂತರ ಮನೆಯಲ್ಲಿ ದುಡೀಲಿಕ್ಕೆ ಬಿಡೋ ಪದ್ಧತಿ ಭಾಳ ಹಳೇ ಪದ್ಧತಿ. ಇದಕ್ಕ ಬೇಕಾರ ಜೀತ ಪದ್ಧತಿ ಅಂತಾನೂ ಅನ್ರಿ. ಈಗ್ಲೂ ಆ ಅನಿಷ್ಠ ಪದ್ಧತಿ ಅಲ್ಲಲ್ಲಿ ಅಸ್ತಿತ್ವದಲ್ಲಿದೆ. ಅದರ ಪರಿಣಾಮವೇ ನಮ್ಮ ರಾಮು ಸಾಲಿ ಬಿಟ್ಟಿದ್ದು. ಆ ಅನಿಷ್ಠ ಪದ್ಧತಿ ಹೋಗಬೇಕು. ಆದ್ರ ಅದು ಸಾಧ್ಯವೆ? ಸಾಧ್ಯ ಅದ. ಅದಕ್ಕ ನಂಬಿಕೆ ಬೇಕು. ಮನುಷ್ಯತ್ವದ ಹೃದಯ ಬೇಕು. ಬನ್ನಿ ಮುಂದ ರಾಮನ ಕಥಿ ಏನಾತು ನೋಡೋಣ.



## ಹಾಡು

ಬಾಲ ಬಾಲಕಿಯರಿಗೆಲ್ಲಾ
ಶಾಲೆಯೇ ಸವಿ ನೆನಪು
ಶಾಲೆಯ ಬಿಡಿಸಿದರೆ ನಮ್ಮ
ಬಾಲೆ ಬಾಲೆಯರ ಬದುಕು
ಬರೆ ಹಳವಂಡವ್ರೊ
ಬಾಲ ಬಾಲೆಯರ ಬದುಕು
ಹಳವಂಡ ಕಾಣಿರೊ ಅಂಥ
ಶಾಲೆ ಬಿಡಿಸುವ ಜನವು
ಜಗಭಂಡವ್ರೋ ತಮ್ಮ ಜಗಭಂಡವ್ರೋ
ತಾ ಮಾಡಿದ ಸಾಲಕ್ಕೆ
ತಮ್ಮ ಕರುಳ ಕುಡಿಯ
ನಿರಕ್ಷರಿ ಮಾಡಿ ಬಾಡಿಗೆ
ಬಾಳುವೆ ಮಾಡುವುದು
ತರವಲ್ಲವ್ರೋ ಮನುಜ ತರವಲ್ಲವ್ರೋ



# ದೃಶ್ಯ 2

(ಒಂದು ಕಡೆ ರಾಮು ಗೌಡರ ಮನೆ ಕೆಲಸ ಮಾಡುತ್ತಿದ್ದಾನೆ. ಗೌಡರ ಮಗಾ ಟಿ.ವಿ. ನೋಡುತ್ತಿದ್ದಾನೆ. ಆತನೇ ರಾಮುವಿನ ವಯಸ್ಸಿನವನೇ. ಗೌಡರೂ ಅಲ್ಲೇ ಇದ್ದಾರೆ. ಟಿ.ವಿ.ಯಲ್ಲಿ ರಸಪ್ರಶ್ನೆಗಳು ಬರುತ್ತಿವೆ. ರಸಪ್ರಶ್ನೆಗಳನ್ನು ಕ್ಯಾನವಾಸಿನಲ್ಲಿ ಬರೆದು ತೋರಿಸಬಹುದು).

**ಟಿ.ವಿ.ಅನೌನ್ಸರ್** (ಧ್ವನಿ ಮಾತ್ರ) : ನಮಸ್ಕಾರ ಇಂದಿನ ಮಕ್ಕಳ ವಿಶೇಷ ರಸಪ್ರಶ್ನೆಗೆ ನಿಮಗೆ ಸ್ವಾಗತ.ಈ ಕಾರ್ಯಕ್ರಮ ಇಂದು ಕೊನೆ ಹಂತ ತಲುಪುತಿದೆ. ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ನೀಡಿ ಅಂತಿಮ ಬಹುಮಾನ ಗೆಲ್ಲಿ. (ಚಪ್ಪಾಳೆ ಶಬ್ದ).

**ಪ್ರಶ್ನೆ** : ಕರ್ನಾಟಕದ ಏಕೀಕರಣಕ್ಕೆ ಹೋರಾಡಿ, ಕರ್ನಾಟಕದ ಕುಲಪುರೋಹಿತ ಎಂದು ಹೆಸರು ಪಡೆದ ಕನ್ನಡದ ಗಣ್ಯ ವ್ಯಕ್ತಿ ಯಾರು?

1. ಶಿವರಾಮ ಕಾರಂತ
2. ಬೆನಗಲ್ ರಾಮರಾಯರು
3. ಕಡಂಗೋಡ್ಲು ಶಂಕರಭಟ್ಟರು
4. ಆಲೂರು ವೆಂಕಟರಾಯರು



**ಗೌಡರ ಮಗಾ** : ಅಪ್ಪಾ ಅಪ್ಪಾ ಯಾರಪ್ಪಾ?

**ಗೌಡ** : ಏ ಸುಮ್ಮನೆ ನೋಡೋ, ಅದ್ರಾಗ ಹೇಳ್ತಾರ.

**ರಾಮು** : (ಕೆಲಸ ಮಾಡುತ್ತಿದ್ದವನು) ಆಲೂರು ವೆಂಕಟರಾಯರು.

**ಟಿ.ವಿ.** : ಸರಿಯಾದ ಉತ್ತರ 4. ಆಲೂರು ವೆಂಕಟರಾಯರು.

**ಗೌಡ** : ಲೇ ತಿಳಕೋ (ಎಂದ ಮಗನಿಗೆ ಗದರುತ್ತಾನೆ). ಅದೇನು ಕಾನ್‌ವೆಂಟ್ ಅಂತಾ ಕಲಿತಿಯೋ, ಈ ಆಳನನ್ ಮಕ್ಕಳಿಗೆ ಇದ್ದ ಜ್ಞಾನ ನಿನಗಿಲ್ಲ. ನೋಡು ನೋಡು ಇನ್ನೊಂದು ಪ್ರಶ್ನೆ ಬಂತು.

**ಟಿ.ವಿ.** : ಜಗತ್ತಿನ ಏಳು ಅದ್ಭುತಗಳಲ್ಲಿ ಇದೂ ಒಂದು.

1. ಕುತುಬ್ ಮಿನಾರ್ 2. ಗೋಳಗುಮ್ಮಟ

3. ತಾಜ್‌ಮಹಲ್ 4. ಬಾದಾಮಿಯ ಮೇಣಬಸ್ತಿ

**ಗೌಡರ ಮಗ** : ಗೋಳಗುಮ್ಮಟ

**ರಾಮು** : ಅಲ್ಲಾ, ತಾಜ್‌ಮಹಲ್

**ಟಿ.ವಿ.** : ಸರಿಯಾದ ಉತ್ತರ 3. ತಾಜ್‌ಮಹಲ್.

**ಗೌಡ** : ನೋಡಿದೇನೋ, ಕಲಿತುಕೋ, ಆ ರೈತನ ಮಕ್ಕಳೀಗೆ ಇರೋ ಜ್ಞಾನ ನಿನಗಿಲ್ಲಲ್ಲೋ.

**ಟಿ.ವಿ.** : (ಒಂದು ಮುಖ, ಅದು ನಟನದೇ ಆದರೆ ಉತ್ತಮ, ಆತನ ಮೇಲೆ ಬೆಳಕು ಬಿಡಬೇಕು). ವೀಕ್ಷಕರೆ ಇದೊಂದು ಪ್ರಕಟಣೆ, ಮಕ್ಕಳು ದೇಶದ ಭವಿಷ್ಯದ ಕುಡಿಗಳು, ಪ್ರಾಥಮಿಕ ಶಿಕ್ಷಣ ಪಡೆಯುವುದು ಮಕ್ಕಳ ಮೂಲಭೂತ ಹಕ್ಕು. ಹದಿನಾಲ್ಕು ವರ್ಷದೊಳಗಿನ ಪ್ರತಿಯೊಂದು ಮಗುವಿಗೂ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯವಾಗಿ ಕೊಡಿಸಬೇಕು. ಜೀತ ಪದ್ಧತಿ ಒಂದು ಅನಿಷ್ಠ ಪದ್ಧತಿ. ಅದಕ್ಕೆ ಪ್ರಚೋದನೆ ನೀಡಿ ಮಕ್ಕಳನ್ನು ಜೀತಕ್ಕೆ ಇರಿಸಿಕೊಳ್ಳುವುದರ ಮೇಲೆ ಕಾನೂನು ಕ್ರಮ ಕೈಕೊಳ್ಳಲಾಗುವುದು. (ಟಿ.ವಿ. ಪರದೆಯಿಂದೆ ಸರಿಯುತ್ತದೆ, ಗೌಡ ಚಿಂತೆಯಲ್ಲಿದ್ದಾನೆ).

**ಗೌಡ** : (ಸ್ವಗತ) ನಾನು ತಪ್ಪು ಮಾಡ್ತಾ ಇದ್ದೇನಾ? ನಮ್ಮ ಈಶ್ವರನ ಮಗಾ ಎಂಥಾ ಜಾಣಾ, ಅಂಥಾ ಎಳೆಮಗೂನ ಸಾಲಿ ಬಿಡಿಸಿ ಕೆಲಸಕ್ಕೆ ಹಚ್ಚಿದ್ದು ತಪ್ಪು ಅಲ್ವಾ? ಈಶ್ವರಪ್ಪ ನನ್ನಿಂದ ಪಡೆದ ಸಾಲಾ ಹ್ಯಾಗೆ ಹಿಂದಿರುಗಿ ಪಡೆಯೋದು! ಥೆ ಮಳೆ ಸರಿಯಾದ ಕಾಲದಲ್ಲಿ ಆಗಿದ್ದರೆ ಆತ ಯಾಕ ಸಾಲ ಮಾಡ್ತಿದ್ದಾ. ಎಲ್ಲೋ ಆದ ತಪ್ಪಿಗೆ ಪಾಪ ಮಗೂಗೆ ಯಾಕೆ ಶಿಕ್ಷೆ. ಇದು ಸರಿ ಅಲ್ಲಾ. (ತನ್ನ ಮಗನಿಗೆ) ಲೇ ತಮ್ಯಾ ಈ ಮಗೂನ್ ಕರಕೊಂಡು ಆಟಾ ಆಡಲಿಕ್ಕೆ ಹೋಗು.

**ಮಗ** : ಆಯಿತು ಅಪ್ಪ (ಆತ ಸಂತೋಷದಿಂದ) ರಾಮು ರಾಮು ನಡಿಯೋ ಆಟಾ ಆಡೋಣ.

**ರಾಮು** : ಆದ್ರ......ಆದ್ರ......ಕೆಲಸ

**ಗೌಡ** : ಏ ಹೋಗೋ ಹೋಗೋ..........ಕೆಲಸಾ ಆಮೇಲೆ ಮಾಡಿಯಂತ.

(ಅಷ್ಟರಲ್ಲಿ ಈಶ್ವರಪ್ಪ ಪ್ರವೇಶ)

**ಈಶ್ವರಪ್ಪ** : ನಮಸ್ಕಾರ ಧಣೀಗಳಿಗೆ

**ಗೌಡ** : ಬಾ ಈಶ್ವರಪ್ಪಾ ಬಾ. ಈಶ್ವರಪ್ಪಾ ನಿನ್ನ ಮಗಾ ರಾಮು (ರಾಗ ಎಳೆಯುತ್ತಾನೆ).

ಈಶ್ವರಪ್ಪ : ಯಾಕ್ರಿ ಧಣಿ...... ಕೆಲಸಾ ಸರಿ ಮಾಡಂಗಿಲ್ಲೇನ್ರಿ, ಆತ ಭಾಳ ಹಠಮಾರಿ, ಅದಕ್ಕ ಏನಾರ ಅನಾಹುತ ಮಾಡಿಗಿಡ್ಯಾನಂತ ನಾನ ನೋಡಿಕೊಂಡು ಹೋಗ್ಲಿಕ್ಕೆ ಬಂದೆ.

ಗೌಡ : ಛೆ, ಛೆ, ನೀ ತಪ್ಪು ತಿಳದಿ ನಿನ್ನ ಮಗಾ ಭಾಳ ಶಾಣ್ಯಾ ಆತನ್ನ ಸಾಲಿ ಬಿಡಿಸಿ ಕೆಲಸಕ್ಕೆ ಹಚ್ಚಿದ್ದು ನಮ್ಮ ತಪ್ಪು.

ಈಶ್ವರಪ್ಪ : ಧಣೀ ನಿಮ್ಮ ಮಾತು ........

ಗೌಡ : ಹೌದು ಈಶ್ವರಾ ರಾಮನ್ನ ನೀ ಯಾವುದೇ ಕಾರಣಕ್ಕೂ ಸಾಲಿ ಬಿಡಸಬ್ಯಾಡ ಕಷ್ಟಾ ಏನೇ ಬರಲಿ, ಅದನ್ನ ನಾವು ದೊಡ್ಡೋರು ನಿಭಾಯಿಸೋಣ. ಪಾಪ ಬೆಳೆಯೋ ಮಕ್ಕಳಿಗೆ ಶಿಕ್ಷಣ-ಸಂಸ್ಕೃತಿ ಕೊಡದಿದ್ದರೆ ಸಾಮಾಜಿಕ ನ್ಯಾಯ ಅನ್ನೋದಕ್ಕ ಅರ್ಥ ಇರೋದಿಲ್ಲ. ತಿಳೀತ, ನಿನ್ನ ಮಗನ ಸಾಲಿ ಖರ್ಚು ನಾನು ನೋಡಕೋತೀನಿ ಆತ ದೊಡ್ಡವಾದ ಮೇಲೆ ದೊಡ್ಡ ನೌಕರಿ ಹಿಡೀಲಿ, ಇಂಜನೀಯರೋ, ಡಾಕ್ಟರೋ, ಆಗಲಿ ಆಮೇಲೆ ನನ್ನ ರೊಕ್ಕ ಹಿಂತಿರುಗಿ ಕೊಡಲಿ. ಆತ ಸಮಾಧಾನ?

ಈಶ್ವರಪ್ಪ : ಗೌಡ್ರ ನಿಮ್ಮ ಮನಸ್ಸು ದೊಡ್ಡದು. ರಾಮನ್ನ ಕೆಲಸಕ್ಕ ಹಚ್ಚೋದ್ರಾಗ ತಪ್ಪು ನಂದೂ ಐತಿ. ನಮ್ಮ ಬಡತನಕ್ಕ ಆಧಾರವಾಗಲಿ ಅಂತ ಮಕ್ಕಳನ್ನ ದುಡಿಲಿಕ್ಕೆ ಹಚ್ಚತಿವಲ್ಲಾ ಅದು ದೊಡ್ಡ ತಪ್ಪು ಅಂತ ನಮ್ಮಂತಹ ಜನಾ ತಿಳಕೋಬೇಕು. ಅದು ಎಲ್ಲಾ ಅಪ್ಪಂದರ ಜವಾಬ್ದಾರಿ. ಅಪ್ಪಾರ ನಿಮ್ಮ ದೊಡ್ಡ ಮನಸ್ಸಿನಿಂದ ನನ್ನ ಕಣ್ಣ ತೆರೆಸಿದ್ರಿ. ಬರ್ತೇನ್ರಿ. ನಾಳೆ ನಮ್ಮ ಲಕ್ಷ್ಮಿನ ನೋಡಾಕ ಬರೋರಿದ್ದಾರ್ರೀ ಅದಕ ಗಡಾ ಸ್ವಲ್ಪ ಸಂತಿ ಮಾಡೋದೈತರಿ.

ಗೌಡ : ಏ ಈಶ್ವರಪ್ಪಾ ಸ್ವಲ್ಪ ತಡಿ.......ನಿನ್ನ ಮಗಳನ್ನ ನೋಡಾಕ ಬರ್ತಾರ.......ಅಷ್ಟು ದೊಡ್ಡಾಕಿ ಆದಳೇನು ನಮ್ಮ ಲಕ್ಷ್ಮಿ.

ಈಶ್ವರಪ್ಪ : ಏ ಆಕೇನ್ ದೊಡ್ಡಾಕಿ ಆಗ್ತಾಳ್ರಿ....... ಅವರವ್ವಗ ಅವಸರ ಲಗೂನ ಮಗಳಿಗೆ ಗಂಡನ ಹುಡುಕಿದ್ರ ಸಾಕು ತನ್ನ ಜವಾಬ್ದಾರಿ ಮುಗೀತು ಅಂತ ಒಂದ ಸವನ ಬೆನ್ನ ಹತ್ಯಾಳ.

ಗೌಡ : ನಿನ್ನ ಹೆಂಡತಿ ಜೋರ ಮಾಡಿದ್ಲೂ? ನೀನು ಮಗಳ ಮದುವಿ ಮಾಡಾಕ ನಿಂತಿ ಹೌದ?

ಈಶ್ವರಪ್ಪ : ಹೌದ್ರಿ.......ಅ ಲ್ಲಾ ಇದ್ರಾಗೇನು ತಪ್ಪೈತ್ರಿ?

ಗೌಡ : ತಪ್ಪಂತ ತಪ್ಪ, ಅಲ್ಲೋ ಮಳ್ಳ ಆ ಎಳೇ ಹುಡುಗೀಗೆ ಸಾಲಿ ಕಲಿಸೋದು ಬಿಟ್ಟ ಲಗ್ನಾ ಮಾಡಾಕ ಹೊಂಟೀಯಲ್ಲಾ ಬುದ್ಧಿ ಎಲ್ಲಿಟ್ಟೀದಿ, ನೋಡು ಹುಡುಗಿ ಇರಲಿ, ಹುಡುಗ ಇರಲಿ, ಎಲ್ಲರಿಗೂ ಪ್ರಾಥಮಿಕ ಶಿಕ್ಷಣಾ ಸಿಗಾಕಬೇಕು. ಮತ್ತ ಹುಡುಗಿಗೆ ಹದಿನೆಂಟು ವರ್ಷ ತುಂಬೋದ್ರೊಳಗ ಮದುವಿ ಮಾಡೋಹಂಗಿಲ್ಲ ಅಂತ ಕಾನೂನಿಲ್ಲ?

ಈಶ್ವರಪ್ಪ : ಐತ್ರಿ ಆದರ........

ಗೌಡ : ಇದ ನೋಡು, ಕಾಲ ಇಷ್ಟು ಬದಲಾಗೈತಿ ನೀವು ಅನಿಷ್ಟ ಪದ್ಧತಿ ಇನ್ನೂ ಬಿಡೋದೇ ಇಲ್ಲವಲ್ಲೊ. ಹೋಗೋ ಈಗಿಂದೀಗೆ ಆ ಹುಡುಗನ ಕಡೆಯವರಿಗೆ ಹೇಳು ಇನ್ನೂ ನಾಲ್ಕು ವರ್ಷ ಮಗಳ ಮದುವಿ ಮಾಡೋ ವಿಚಾರಿಲ್ಲ ಆಕಿ ಸಾಲಿಗೆ ಹೋಕ್ತಾಳ ಅಂತ ಹೇಳು.

ಈಶ್ವರಪ್ಪ : ಆದ್ರ.......ಅದೂ.........

ಗೌಡ : ನಾನಿದ್ದೇನೋ ಹೆದ್ರಬ್ಯಾಡ........ ಹೆಣ್ಣ ಮಕ್ಕಳ ಶಿಕ್ಷಣ ಸಲುವಾಗಿ ಸರ್ಕಾರ ಭಾಳ ಯೋಜನೆ ಹಾಕ್ಕೊಂಡಾರ. ಅದರ ಉಪಯೋಗ ಪಡೆದು ನಿನ್ನ ಲಕ್ಷ್ಮಿಗೂ ಒಂದು ದಾರಿ ತೋರ್ಸೋಣು ಆತ

ಈಶ್ವರಪ್ಪ : ಹಾಗೆ ಆಗಲಿ ಗೌಡ್ರ ಬರ್ತೀನಿ.

ಗೌಡ : ಆತು ಹೋಗಿ ಬಾ....... ರಾಮು..... ನಿನ್ನ ಅಪ್ಪಾ ಬಂದಾನ ಮನಿಗೆ ಹೋಗು. (ರಾಮು ಗೌಡ್ರ ಮಗಾ ಪ್ರವೇಶ ಅವರು ನಲಿಯುತ್ತಿದ್ದಾರೆ).

ಈಶ್ವರಪ್ಪ : ನಡಿ ಮಗಾ ಮನಿಗೆ ಹೋಗೋಣ.

ರಾಮ : ನಾಳೆ ಮತ್ತೆ ಇಲ್ಲಿ ಬರಬೇಕಾ?

ಗೌಡ : ಬ್ಯಾಡ ಮಗಾ. ಸಾಲಿಗೆ ಹೋಗಿ ದೊಡ್ಡ ಮನಶ್ಯಾ ಆಗಿ ನಮ್ಮ ಹಳ್ಳಿಗೆ ದೊಡ್ಡ ಕೀರ್ತಿ ತೊಗೊಂಡು ಬಾ. ದೇವರು ನಿನಗೆ ಒಳ್ಳೇದು ಮಾಡ್ಲಿ ಹೋಗಿ ಬಾ.

ಈಶ್ವರಪ್ಪ : ರಾಮು, ಗೌಡ್ರಿಗೆ ನಮಸ್ಕಾರ ಮಾಡು. (ರಾಮು ನಮಸ್ಕಾರ ಮಾಡುತ್ತಾನೆ. – ತೆ ರೆ)



ಸಂತ : ಹಾಡು ವಚನದಂತೆ

ಅಜ್ಞಾನದ ದಾರಿ ತುಳಿಯಬೇಡಿ, ಮನುಜರೆ ಅಜ್ಞಾನದ ಅಂಧಕಾರ ತಳ್ಳಿ ಸುಜ್ಞಾನ ಬೆಳೆಸಿಕೊಳ್ಳಿ ಮನುಜರೆ, ಸುಜ್ಞಾನ ಬೆಳೆಸಿಕೊಳ್ಳಿ ಎಲೆ ಮನುಜ, ನಿನಗೆ ಬುದ್ಧಿ ಇರುವ ಜೀವಿ ಎಂದು ಅಗ್ರಪಟ್ಟ ಕಟ್ಟಿದ ಆ ಜಗದೊಡೆಯನನ್ನು ಮರೆತು ನೀನು ಬಾಲಕರನ್ನು ದುಡಿಮೆಗೆ ದೂಡಿ ಪಶುತನದ ಬುದ್ಧಿ ತೋರಬೇಡವೋ ಎಲೆ ಮನುಜ, ಅಜ್ಞಾನದ ದಾರಿ ತುಳಿಯಬೇಡ

ಮಾತು : ಏನು ವಿಚಿತ್ರ ! ಅಲ್ಲ. ಮನುಷ್ಯನ ಅಂತರಾಳದಲ್ಲಿ ಒಳ್ಳೇತನಾ ಹುದುಗಿಕೊಂಡಿರ್ತದ ಆದರ ಆ ಒಳ್ಳೇತನ ಅಜ್ಞಾನದ ಅಂಧಕಾರದಲ್ಲಿ ಕಾಣಿಸೋದೇ ಇಲ್ಲ. ಸ್ವಲ್ಪ ಮನುಷ್ಯತ್ವದ ಬೆಳಕ ಹಿಡಿದರ ಆ ಅಜ್ಞಾನ ಸುಜ್ಞಾನ ಆಗ್ತದ ಒಳ್ಳೇತನಾ ಝುಗಮಗಿಸ್ತದ. ನಮ್ಮ ಗೌಡ್ರ ಮನಸ್ಸಿನಲ್ಲಿ ಆದ ಪರಿವರ್ತನೆ ಇಂಥಾದೆ. ಮಕ್ಕಳನ್ನ ಶೋಷಣೆ ಮಾಡೋ ಹಕ್ಕು ಯಾರಿಗೂ ಇಲ್ಲ. ನಮ್ಮ ದೇಶದ ಕಾನೂನು ಅಷ್ಟು ಮಜಬೂತದ ಜೀತ, ಶೋಷಣೆ, ಬಾಲಕಾರ್ಮಿಕ ಪದ್ಧತಿ ಲೈಂಗಿಕ ಶೋಷಣೆ ಹೀಂಗ ಯಾವುದೇ ಅನಿಷ್ಠ ವರ್ತನೆಗೆ ಕಾನೂನು ತಕ್ಕ ಶಿಕ್ಷಾ ನೀಡತದ ಎಚ್ಚರಿರಲಿ.

ಫಕೀರ : (ಪ್ರವೇಶಿಸಿ) ಬಾಬಾ ಬಾಬಾ ರಾಮನ ಗೆಳೆಯಾ ರಹೀಮನ ಸುದ್ದಿ ಗೊತ್ತೈತೇನು?

ಸಂತ : ಇಲ್ಲಾ, ಯಾಕ? ಆತ ರಾಮನ ಜೊತಿಗೆ ಸಾಲಿಗೆ ಹೋಗಿಲ್ಲಾ?



ಫಕೀರ : ಅದ ಬಾಬಾ, ಇವೊತ್ತು ಆತ ಸಾಲಿಗೆ ಹೋಗಿಲ್ಲ. ಅವರಪ್ಪ ಅವನ್ನ ಏನೋ ಪಕ್ಕದ ಶಹರಕ್ಕ ಕರಕೊಂಡು ಹೋದನಂತ.

ಸಂತ : ಯಾಕ?

ಫಕೀರ : ಆ ಬಡೇಮಿಯಾ ಅವನ್ನ ಯಾವುದೋ ಗ್ಯಾರೇಜಿನ್ಯಾಗ ಕೆಲಸಕ್ಕ ಹಚ್ಯಾನಂತ.

ಸಂತ : ಹೌದು ಪಾಪ ಆ ಹುಡುಗ ಎಷ್ಟು ಶ್ಯಾಣೆ ಇದ್ದಾ.

ಫಕೀರ : ಆ ಹುಡುಗನ ಗೆಳೆಯಾ ರಾಮು ರಹೀಮ ಸಾಲೀಗೆ ಬರ್ಲಿಲ್ಲಾ ಅಂದ್ರ ನಾನೂ ಸಾಲೀಗೆ ಹೋಗೋದಿಲ್ಲ ಅಂತ ಹಟಾ ಹಿಡಿದಾನಂತ, ಅದಕ್ಕ ಅವರಪ್ಪಾ ಬಡೇಮಿಯಾನ ಭೇಟಿ ಆಗಲಿಕ್ಕೆ ಶಹರಕ್ಕ ಹೋಗ್ಯಾನಂತ ಹಂಗೆಲ್ಲಾ ಮಕ್ಕಳನ್ನ ಕೆಲಸಕ್ಕ ಹಚ್ಚಬ್ಯಾಡ ಅಂತ ಆತಗ ಬುದ್ಧಿ ಹೇಳಿ ರಹೀಮನ್ನ ತಿರುಗಿ ಕರಕೊಂಡು ಬರಲಿಕ್ಕೆ ರಾಮು ಅಪ್ಪಾ ಬೀದರಿಗೆ ಹೋಗ್ಯಾನಂತ.

ಸಂತ : ಭಲೆ ಭಲೆ........ ಜ್ಞಾನ ಅಂದ್ರ ಇದು, ನಡೀ ನಾವೂ ಶಹರಕ್ಕ ಹೋಗೋಣ. ರಹೀಮನ ಮ್ಯಾಲೆ ಕಾಳಜಿ ಇಟ್ಟ ಆ ರಾಮನ ತಂದೆಗೆ ನೈತಿಕ ಬಲಾ ಕೊಡೋಣ.

ಫಕೀರ : ನಡಿ ಹಂಗಾರ.

## ಹಾಡು

ಫಕೀರ ಸಂತರ ಜೋಡಿ
ಶಹರಕ ಹೊರಟಿತು ನೋಡಿ
ರಾಮನ ಅಪ್ಪಗ ನೈತಿಕ
ಬೆಂಬಲ ನೀಡಿ
ಬಡೇಮಿಯಾಂಗ ಬುದ್ಧಿಯ ಹೇಳಿ
ಹರಿಯಲು ರಹೀಮನ
ಬಾಲಕಾರ್ಮಿಕ ಬೇಡಿ

## ದೃಶ್ಯ 3

(ಒಂದು ಕಾರ್ ಗ್ಯಾರೇಜ್ ಬೋರ್ಡ್ ಬಡೇಮಿಯಾ, ರಾಮುನ ಅಪ್ಪ, ಫಕೀರ ರಾಮು ಪ್ರವೇಶ)

**ಈಶ್ವರಪ್ಪ :** ಎಲ್ಲಿಪಾ ನಿನ್ನ ಮಗಾ?

**ಬಡೇಮಿಯಾ :** ಅಕಾ ಅಲ್ಲಿ ಗ್ಯಾರೇಜಿನ್ಯಾಗಾ ಆ ಕಾರ ಕೆಳಗೆ ಇದ್ದಾನ ನೋಡು.

**ಈಶ್ವರಪ್ಪ :** ರಹೀಮ...... ರಹೀಮ (ರಹೀಮ್ ಪ್ರವೇಶ ಆತ ಗಲೀಜಾಗಿದ್ದಾನೆ. Puppet change ಮಾಡಿಕೊಳ್ಳಬೇಕು.) ನಡಿಯೋ ಮನಿಗೆ ರಾಮು ನಿನ್ನ ಕರಕೊಂಡು ಹೋಗಲಿಕ್ಕೆ ಬಂದಾನ. ನಿಮ್ಮ ಅಪ್ಪಗ ಎಲ್ಲಾ ನಾವು ತಿಳಿಸಿ ಹೇಳೇವಿ.

**ರಹೀಮ :** ಆದ್ರ ಗ್ಯಾರೇಜ ಮೇಸ್ತ್ರಿ.

**ಈಶ್ವರಪ್ಪ :** ಆತ ಏನಾರ ಎಗರಾಡಿದ್ರ ನಾನು ಆವನ್ನ ಇಸ್ತ್ರಿ ಮಾಡ್ತೀನಿ ನೀ ನಡಿ ಊರಿಗೆ.

**ಮೇಸ್ತ್ರಿ :** ಯಾರಪ್ಪಾ ಗ್ಯಾರೇಜಿನ್ಯಾಗ ಗದ್ದಲಾ ಯಾಕಾ?

**ಈಶ್ವರಪ್ಪ :** ನಾವ್ಯಾಕ್ರಿ ನಿಮ್ಮ ಗ್ಯಾರೇಜಿನ್ಯಾಗ ಸುಮ್ಮ ಸುಮ್ಮನೆ ಗದ್ದಲಾ ಹಾಕೋಣ. ಮಕ್ಕಳನ್ನ ಕೆಲಸಕ್ಕ ಇಟಗೊಂಡು ಕಾನೂನು ಮುರುದು ನೀವು ಗದ್ದಲಾ ಹಾಕ್ತಾ ಇದ್ದೀರಿ.

**ಮೇಸ್ತ್ರಿ :** ಅವರಪ್ಪ ಇಸ್ ಛೋಕರೇಕೊ ಇದರ ಛೋಡಕೆ ಗಯಾ ಹಮ್ ಕ್ಯಾ ಕರೆ?

**ಈಶ್ವರಪ್ಪ :** ನೋಡಪಾ ಹೀಂಗ ಗಿಡದಾಗಿನ ಮಂಗ್ಯಾ ಕೈ ಚೆಲ್ಲಿ ಕೂತ್ಹಾಂಗ ಹಮ್ ಕ್ಯಾ ಕರೆ ಅಂತ ಕೈ ಚೆಲ್ಲಿದ್ರ ನಡೆಯೋದಿಲ್ಲ. ಸ್ವಲ್ಪ ನೀತಿ ನ್ಯಾಯ ಇರಲಿ. ಈ ಹುಡುಗನ ಅಪ್ಪ ಬಡವಾ ಆತ ಏನೋ ಪರಿಸ್ಥಿತಿ ಒತ್ತಡದಿಂದ ಈ ಹುಡುಗನ್ನ ಕೆಲಸಕ್ಕ ಕರಕೊಂಡ ಬಂದಾ ಖರೆ ಆದ್ರೆ ಕೆಲಸಕ್ಕೆ ತೊಗೊಳ್ಳೊಂವಾ ನಿನಗೆ ಕರುಣೆ, ಕರುಳು ಇರಬ್ಯಾಡದೇನೋ, ಆ ಹುಡುಗ ಏನು ದಾರಿ ಬಿಟ್ಟ ಫಡಮೋಶಿ ಅಲ್ಲ. ಹಂಗೊಂದ್ವೇಳೆ ಪೋಕರಿ ಇದ್ದರೂ ಮಕ್ಕಳ ಅಪರಾಧ ಅಂತನ ಕಾನೂನಿನ ವ್ಯವಸ್ಥೆ ಅದ, ಅಥವಾ ಏನೂ ಅರಿಯದ ಕಂದಮ್ಮಗಳನ್ನ ನಿಮ್ಮ ಸ್ವಾರ್ಥಕ್ಕೆ ಕೆಲಸಕ್ಕೆ ಹಚ್ಚತೀರಲ್ಲಾ ನಿಮಗ ತಿಳೀಬಾರದೂ, ನೋಡು ಇದ ಕೊನೆ ಇನ್ನು ಮುಂದ ಇಂಥ ಕೆಲಸಾ ಮಾಡಬ್ಯಾಡ ತಿಳೀತು. ರಹೀಮ ನಡಿ ನಡಿ.

**ರಹೀಮ :** ರಾಮ ....... ಅಬ್ಬಾಜಾನ !

**ಬಡೇಮಿಯಾ :** ಬೇಟಾ, ನಿನ್ನ ಅಪ್ಪಾ ಸೈತಾನ ಇದ್ದಾನ ನಿನ್ನ ಕೆಲಸಕ್ಕೆ ಹಚ್ಚಿಬಿಟ್ಟಾ (ಆತ ದುಃಖಿಸುತ್ತಾನೆ).

**ಈಶ್ವರಪ್ಪ :** ಛೆ......ಛೆ..... ಹಾಗೆಲ್ಲಾ ದುಃಖಪಡಬ್ಯಾಡ ಏನೋ ತಿಳೀದೇ ಮಾಡಿದ ತಪ್ಪು, ನೀ ಮಾಡಿದ ತಪ್ಪಿಗೆ ಮಕ್ಕಳನ್ನ ದುಡಿಮೆಗೆ ಹಚ್ಚೋದು ತಪ್ಪು, ನಡೀ ಹಳ್ಳಿಗೆ ಹೋಗೋಣ ಈ ರಾಮ ರಹೀಮರಂದ್ರ ಊರಿಗೆ ಮಾದರಿ ಗೆಳೆಯರು, ಈ ಮಕ್ಕಳು ಜಾಣರಿದ್ದಾರ. ಅವರು ಸಾಲಿ ಕಲೀಲಿ, ಹೊಸ ಬೆಳಕು ಎಲ್ಲ ಮಕ್ಕಳಂತೆ ಕಾಣಲಿ. ಜಾತಿ ಯಾವುದಾದರೇನು ಧರ್ಮ ಯಾವುದಾದರೇನು ಜ್ಞಾನಕ್ಕೆ ನೀತಿಗೆ ಧರ್ಮ ಜಾತಿಗಳ ಹಂಗಿಲ್ಲಾ, ನಡಿ! ನಡಿ.

**ಫಕೀರ :** ನೋಡಿದಿರಾ ಪ್ರೇಕ್ಷಕರೆ ನಮ್ಮ ಈಶ್ವರಪ್ಪ ಮನಸ್ಸು ಎ0ಥಾ ದೊಡ್ಡದು. ತನ್ನ ಮಗನ ಭವಿಷ್ಯದ ಜೊತೆಗೆ ಎಲ್ಲ ಮಕ್ಕಳೂ ಸುಶಿಕ್ಷಿತರಾಗಬೇಕು ಅ0ತ ತನ್ನ ಗೆಳೆಯಾನ ಮಗನ ಗ್ಯಾರೇಜ ಕೆಲಸದಿಂದ ಬಿಡಿಸಿದಾ.

**ಸಂತ :** ಸ್ವಾಮಿ ಈ ಆಟ ಮುಗಿಯೋ ಮುನ್ನ ಜನಕ್ಕೆ ಈ ಬಾಲಕಾರ್ಮಿಕತೆಗೆ ಏನೇನು ಕಾರಣ ಇನ್ನಷ್ಟು ತಿಳಿಸಿ ಹೇಳೋಣಲ್ಲ.

**ಫಕೀರ :** ಹಾ0ಗಾಗಲಿ. ಪ್ರೇಕ್ಷಕರೆ ನೀವೆಲ್ಲಾ ಪ್ರಭುದ್ಧರು. ನೀವು ಸ್ವಲ್ಪ ವಿಚಾರ ಮಾಡಿದ್ರೆ ಈ ಬಾಲಕಾರ್ಮಿಕತೆ ಅನ್ನೋ ಅನಿಷ್ಟ ಪದ್ಧತಿಯನ್ನು ತೊಲಗಿಸಬಹುದು.

**ಸಂತ :** ತಂದೆ–ತಾಯಿಗಳ ಅನಕ್ಷರತೆಯಿಂದಾಗಿ ನಮ್ಮ ಮಕ್ಕಳು ಅನಕ್ಷರಸ್ಥರಾಗೋ ಅಪಾಯ ಇದೆ. ಅದಕ್ಕಾಗಿ ನಿಮ್ಮ ಬಿಡುವಿನ ವೇಳೆ0ುಲ್ಲಿ ನಮ್ಮ ಸರಕಾರ ಹಾಕಿಕೊಂಡ ಶೈಕ್ಷಣಿಕ ಸೌಲಭ್ಯ ಪಡೆದು ನೀವು ಅಕ್ಷರಸ್ಥಾಗಿರಿ, ನಿಮ್ಮ ಮಕ್ಕಳಿಗೂ ಶಿಕ್ಷಣ ಕೊಡಿಸಿ.

**ಫಕೀರ :** ಕುಟುಂಬದ ಕೆಲಸ ನಿಮ್ಮ ವೃತ್ತಿ ಎಂದು ನಿಮ್ಮ ಮಕ್ಕಳನ್ನು ಶಿಕ್ಷಣ ಕೊಡಿಸದೆ ಕೆಲಸಕ್ಕೆ ಹಚ್ಚಬೇಡಿ.

**ಸಂತ :** ವಂಶಪಾರಪ0ುರ್ಯ ಉದ್ಯೋಗ ಮಾಡಿಸಲೇಬೇಕೆಂಬ ನಿಮ್ಮ ಹಟದಿಂದ ನಿಮ್ಮ ಮಕ್ಕಳಿಗೆ ಶಿಕ್ಷಣ ಸಿಗದೇ ಅವರು ಅಶಿಕ್ಷಿತ ಆಗುವ ಅಪಾ0ುವಿರುತ್ತದೆ. ಅಂಥದಕ್ಕೆ ಅವಕಾಶ ಕೊಡದೇ ಎಚ್ಚರಾಗಿ.

**ಫಕೀರ :** ಹೆಣ್ಣೆ ಇರಲಿ, ಗಂಡೇ ಇರಲಿ, ಶಿಕ್ಷಣ ಕೊಡಿಸುವುದರಲ್ಲಿ ಲಿಂಗ ಪಕ್ಷಪಾತ ಮಾಡಬೇಡಿ. ನೀವು ಈಗ ತಾನೆ ನೋಡಿದ ಕಥೆಯಲ್ಲಿ ರಾಮುವಿಗೆ ಕಲಿಯುವ ಹಕ್ಕು ಎಷ್ಟು ಇದೆಯೋ ಅಷ್ಟೇ ಹಕ್ಕು ಆತನ ಅಕ್ಕಾ ಲಕ್ಷ್ಮಿಗೂ ಶಿಕ್ಷಣ ಪಡೆಯುವ ಹಕ್ಕಿದೆ.

ಸಂತ : ಜವಾಬ್ದಾರಿರಹಿತವಾಗಿ ಕುಟುಂದ ಗಾತ್ರ ದೊಡ್ಡದಾಗಿ ಮಾಡಿಕೊಂಡರೆ ಆ ಕುಟುಂಬ ಸಲುಹಲು ವರಮಾನ ಸಾಲದೇ ಮಕ್ಕಳನ್ನು ಜೀತಕ್ಕೆ, ಕೆಲಸಕ್ಕೆ ಹಚ್ಚುವ ಅನಿವಾರ್ಯ ಸಂಭವವನ್ನು ಹೆಚ್ಚಿಸಿಕೊಳ್ಳಬೇಡಿ.

ಫಕೀರ : ಕೊನೆಯದಾಗಿ ನಿಮ್ಮ ಕುಡಿತ, ಜೂಜು ಇತ್ಯಾದಿ ಕೆಟ್ಟ ಚಟಗಳಿದ್ದರೆ ತತ್‌ಕ್ಷಣ ಅವುಗಳಿಂದ ದೂರಾಗಿ. ನೀವೂ ಆರೋಗ್ಯವಂತ ಪ್ರಜೆಗಳಾಗಿ ನಿಮ್ಮ ಮಕ್ಕಳಿಗಾಗಿ ಆ ಚಟಗಳಿಗೆ ಖರ್ಚು ಮಾಡುವ ಧನವನ್ನು ವಿದ್ಯಾಭ್ಯಾಸ ಕೊಡಿಸಲು ಖರ್ಚು ಮಾಡಲು ಇಂದೇ ಪ್ರತಿಜ್ಞೆ ಮಾಡಿ.

ಸಂತ : ಹೌದು ದಯವಿಟ್ಟು ಒಂದು ಸಣ್ಣ ಪ್ರತಿಜ್ಞೆ ಮಾಡಿ. ನಾನು ಹೇಳಿದಂತೆ ಹೇಳಿ."ನಾವು ಇಂದಿನಿಂದ ನಮ್ಮಲ್ಲಿ ಯಾವುದೇ ಸಮಾಜಘಾತುಕ ದುಶ್ಚಟಗಳಿದ್ದರೆ ಅವುಗಳನ್ನು ತ್ಯಜಿಸಿ ನಮ್ಮ ಮಕ್ಕಳಿಗೆ ಉತ್ತಮ ಶಿಕ್ಷಣ ಕೊಡಿಸುತ್ತೇವೆ. ಬಾಲಕಾರ್ಮಿಕತೆ ಎಂಬ ಅನಿಷ್ಟ ಪದ್ಧತಿಯನ್ನು ತೊಡೆದು ಹಾಕುತ್ತೇವೆ. (ಎಲ್ಲರೂ ಹಾಗೆ ಹೇಳುತ್ತಾರೆ)"

## ಹಾಡು

(ಸಂತ–ಫಕೀರ, ಮೇಳ)
ಯಾವ ಜಾತಿಯವನೇ ಇರಲಿ
ಯಾವ ಧರ್ಮದವನೇ ಇರಲಿ
ಎಲ್ಲರೂ ಜ್ಞಾನ ಪಡೆಯಲು ಅರ್ಹರೂ
ಮಕ್ಕಳಲ್ಲಿ ಜಾತಿ ಧರ್ಮ ಎಂಬ ಭೇದ ಭಾವವಿಲ್ಲ ಅದು
ಇದ್ದರೆ ಅದು ದೊಡ್ಡವರಾದ ನಮ್ಮಲಿ.
ಅದೋ ನಮ್ಮ ಕರ್ಮವು.
ಆ ಕರ್ಮದಿಂದ ಬಿಡಿಸಿಕೊಂಡು
ಎಲ್ಲ ಮಕ್ಕಳಿಗೆ ಶಿಕ್ಷಣ ಕೊಡಿಸಿ
ಭವ್ಯ ನಾಡನು ಕಟ್ಟೋಣ
ನೆಮ್ಮದಿಯ ಬಾಳನು ನಡೆಸೋಣ
ಬನ್ನಿ ನೆಮ್ಮದಿಯ ಬಾಳನು ನಡೆಸೋಣ.



ಮುಕ್ತಾಯ

## ಪ್ರದರ್ಶನದ ನಂತರ ಚರ್ಚೆಗೆ ಎತ್ತಿಕೊಳ್ಳಬಹುದಾದ ಪ್ರಶ್ನೆಗಳು:

1. ಜನಸಂಖ್ಯೆಯ ಉಲ್ಬಣದಿಂದಾಗಿ ಬಾಲಕಾರ್ಮಿ ಪದ್ಧತಿ ಹೆಚ್ಚಾಗುತ್ತದೆಯೇ?
2. ಜೀತಪದ್ಧತಿ ಮತ್ತು ಬಾಲಕಾರ್ಮಿಕ ಪದ್ಧತಿಗೆ ಇರುವ ಸಂಬಂಧ ಎಂತಹುದು?
3. ಹಿರಿಯರಾದವರು ತಮ್ಮ ಸಾಂಸಾರಿಕ ಒತ್ತಡ ನಿವಾರಿಸಿಕೊಳ್ಳಲು ಮಕ್ಕಳನ್ನು ಶಾಲೆ ಬಿಡಿಸಿ ದುಡಿತಕ್ಕೆ ಹಚ್ಚುವುದರಿಂದ ಸಮಾಜದ ಮೇಲಾಗುವ ಪರಿಣಾಮ.

# ಗೊಂಬೆಗಳ ತಯಾರಿಕೆ

ಗೊಂಬೆ ಆಟದಲ್ಲಿ ಎರಡು ಪ್ರಮುಖ ಘಟ್ಟಗಳಿವೆ. ಒಂದು ಗೊಂಬೆಗಳ ತಯಾರಿ. ಇನ್ನೊಂದು ಹಾಗೆ ತಯಾರಾದ ಗೊಂಬೆಗಳನ್ನು ನಟಿಸುವಂತೆ ಮಾಡುವುದು. ಹೀಗಾಗಿ ಗೊಂಬೆ ಆಟದಲ್ಲಿ ಗೊಂಬೆಗಳ ನಿರ್ಮಾಣವೂ ಒಂದು ಪ್ರಮುಖ ಘಟ್ಟ. ಗೊಂಬೆ ಆಟ ಹೇಗೆ ಒಂದು ವಿಶಿಷ್ಟ ರಂಗ ಕಲೆಯಾಗಿದೆಯೋ ಹಾಗೆ ಗೊಂಬೆಗಳ ನಿರ್ಮಾಣವೂ ಒಂದು ಕಲಾತ್ಮಕ ಚಟುವಟಿಕೆಯಾಗಿದೆ. ಕಲಾವಿದ ತನ್ನ ಕೈಚಳಕ ಹಾಗೂ ಕಲ್ಪನೆಯಿಂದ ಗೊಂಬೆಗಳಿಗೆ ವೈವಿಧ್ಯಮಯ ರೂಪ ಕೊಡುತ್ತಾನೆ. ಪಾರಂಪರಿಕವಾಗಿ ಸೂತ್ರದ ಗೊಂಬೆ, ತೊಗಲು ಗೊಂಬೆ, ಸಲಾಕೆ ಗೊಂಬೆಗಳನ್ನು ವಿನ್ಯಾಸಗೊಳಿಸುವ ಕಲೆ ನಮ್ಮ ದೇಶದಲ್ಲಿ ಬೆಳೆದು ಬಂದಿದೆ. ಗೊಂಬೆ ಆಟದ ಗೊಂಬೆಗಳ ವಿಶೇಷತೆ ಅಂದರೆ ಆ ಗೊಂಬೆಗಳು ಆಟದ ಕಥಾ ಹಂದರದ ಪಾತ್ರಗಳಾಗಿ ವಿನ್ಯಾಸಗೊಂಡಿರುತ್ತವೆ. ಹೀಗಾಗಿ ಅವುಗಳಿಗೆ ಒಂದು ರೀತಿ ಕ್ಯಾರಕ್ಟರೈಜೇಶನ್ ಲಭ್ಯವಾಗಿರುತ್ತದೆ. ಯಾವುದಕ್ಕೆ ನಾವು ಟಾಯ್ಸ್ (ಆಟಿಕೆ) ಎಂದು ಗುರುತಿಸುತ್ತೇವೆಯೋ ಅವು ಭಿನ್ನವಾಗುವುದು ಈ ದೃಷ್ಟಿಯಿಂದ.

## ನೆರಳು ಗೊಂಬೆ ಅಥವಾ ತೊಗಲು ಗೊಂಬೆಗಳ ತಯಾರಿಕೆ:

ಜಿಂಕೆ, ಒಂಟೆ ಅಥವಾ ಆಡಿನ ಚರ್ಮವನ್ನು ಹದಮಾಡಿ ಹಿಗ್ಗಿಸಿ ಡ್ರಾಯಿಂಗ್ ಶೀಟ್ ಮಾದರಿಯಾಗಿ ಚರ್ಮವನ್ನು ಮೊದಲು ತಯಾರಿ ಮಾಡಿಕೊಳ್ಳುತ್ತಾರೆ. ಇನ್ನೂವರೆಗೆ ಯಂತ್ರದ ಸಹಾಯದಿಂದ ಹೀಗೆ ಡ್ರಾಯಿಂಗ್ ಮಾದರಿ ಚರ್ಮದ ಶೀಟು ತಯಾರಿ ಮಾಡಿಕೊಳ್ಳುವುದು ಸಾಧ್ಯವಾಗಿಲ್ಲ. ಮ್ಯಾನುವಲ್ ಆಗಿಯೇ ಚರ್ಮವನ್ನು ತಯಾರಿ ಮಾಡಿಕೊಳ್ಳುವ ರೂಢಿ ಈಗಲೂ ಮುಂದುವರೆದುಕೊಂಡು ಬಂದಿದೆ.

ಡ್ರಾಯಿಂಗ್ ಶೀಟನಂತೆ ತಯಾರಾದ ಚರ್ಮವು ಟ್ರಾನ್ಸ್‌ಫರೆಂಟ್ ಆಗಿರುತ್ತದೆ. ಆ ಚರ್ಮದ ಮೇಲೆ ಟ್ರಾನ್ಸ್‌ಪರಂಟ್ ಪರಿಣಾಮ ಕೊಡುವ ಬಣ್ಣದಿಂದ ಯಾವುದೇ ಚಿತ್ರ ಬಿಡಿಸಿದರೂ ಆ ಚಿತ್ರ ಆ ಎಲ್ಲ ಬಣ್ಣಗಳೊಂದಿಗೆ ಒಂದು ತೆಳುವಾದ ಬಿಳಿ ಪರದೆ ಮೇಲೆ ಹಿಡಿದಾಗ ಟ್ರಾನ್ಸ್‌ಪರಂಟ್ ಆಗಿ ಕಾಣಿಸಿಕೊಳ್ಳುತ್ತದೆ. ಬಣ್ಣವು Opeque ಇರಬಾರದು. ಅಂದರೆ ಅಪಾರದರ್ಶಕ ಗುಣವುಳ್ಳದ್ದಾಗಿರಬೇಕು. ಹೀಗೆ ಸಿದ್ಧಗೊಂಡ ಗೊಂಬೆಗೆ ಬಿದಿರಿನ ಕಡ್ಡಿ ಹಾಕಿ ಬಿಳಿ ಪರದೆ ಮೇಲೆ ಹಿಡಿದು ಆಡಿಸುತ್ತಾರೆ. ಸೂತ್ರದ ಗೊಂಬೆಯಷ್ಟು ವೈವಿಧ್ಯಮಯ ಚಲನೆಯನ್ನು ಈ ಗೊಂಬೆಗಳಿಗೆ ಕೊಡಲು ಬರುವುದಿಲ್ಲ. ಏಕೆಂದರೆ ಇವು two dimentional ಗೊಂಬೆಗಳು.

ಈ ಗೊಂಬೆಗಳ ತಯಾರಿಕೆಯ ಇನ್ನೊಂದು ವೈಶಿಷ್ಟ್ಯ ಎಂದರೆ ಚರ್ಮದ ಮೇಲೆ ಮಾಡುವ ಆಭರಣದ ಕುಸುರಿ ಕೆಲಸ. ಇದಕ್ಕೆ ಇಂಗ್ಲಿಷ್‌ನಲ್ಲಿ Perfouration ಎಂದು ಹೇಳುತ್ತಾರೆ. ಚರ್ಮದ ಕಸುವು (Strength) ಹಾಳಾಗದಂತೆ ಈ ಆಭರಣೀಕರಣದ ಚಿತ್ತಾರದ ಕೆಲಸ ಕಲಾವಿದನ ಪ್ರತಿಭೆಗೆ ಸಾಕ್ಷಿಯಾಗಿದೆ. ಪಾರಂಪರಿಕವಾಗಿ ಈ ಗೊಂಬೆ ವಿನ್ಯಾಸದ ಕಸುಬು ಮಹತ್ವ ಪಡೆದಿರುವುದು ಈ ಕುಸುರೀ ಕೆಲಸಕ್ಕಾಗಿಯೇ. ಈ ಕುಸುರಿ ಕೆಲಸದಿಂದಾಗಿಯೇ ಬೆಳಕು ಆ ಭಾಗದಿಂದ ಹಾಯ್ದು ಪರದೆಯ ಮೇಲೆ ಬೀಳುವುದರಿಂದ ಗೊಂಬೆಗಳು ಆಕರ್ಷಣೀಯವಾಗಿ ಕಾಣುತ್ತವೆ. ಹೀಗಾಗಿ ತಾಂತ್ರಿಕವಾಗಿಯೂ ಈ ಕೆಲಸಕ್ಕೆ ಮಹತ್ವವಿದೆ.

ಎಣ್ಣೆ ದೀಪದ ಕಪ್ಪು, ಚಾಪೆ ಬಣ್ಣ, ತೆಂಗಿನ ಚಿಪ್ಪನ್ನು ಸುಟ್ಟು ಅದರಲ್ಲಿ ಕೊಬ್ರಿ ಎಣ್ಣೆಯನ್ನು ಬೆರೆಸಿ ತಯಾರಿಸಿದ ಕಪ್ಪು ಹಾಗೂ ಇನ್ನಿತರ ಹರ್ಬಲ್ ಬಣ್ಣಗಳನ್ನು ಹಿಂದೆ ಬಳಸುತ್ತಿದ್ದರು. ಈಗ Luxor Ink, Photo Ink ಬಳಸುವ ರೂಢಿ ಇದೆ. ಈ ಗೊಂಬೆ ವಿನ್ಯಾಸದ ಇನ್ನೊಂದು ವಿಶೇಷವೆಂದರೆ ಕಣ್ಣಿನ ವಿನ್ಯಾಸ. ಗೊಂಬೆ ಪ್ರೊಫೈಲ್ ಫೋಸ್‌ನಲ್ಲಿ ಇದ್ದಾಗ್ಯೂ ಒಂದೇ ಬದಿಗೆ ಎರಡೂ ಕಣ್ಣುಗಳನ್ನು ಬಿಡಿಸಿದ್ದನ್ನು ನೋಡಿದರೆ ಪಿಕಾಸೋನ ಕಲಾಕೃತಿ ನೆನಪಾಗುತ್ತದೆ.

ಆಂಧ್ರದಲ್ಲಿ ಈ ಗೊಂಬೆ ವಿನ್ಯಾಸದ ಕಲೆ ಇನ್ನೂ ಉಳಿದುಕೊಂಡಿದೆ. ಧರ್ಮಾವರಂ ತಾಲೂಕಿನ ನಿಮ್ಮಲಕುಂಟಾ ಎಂಬ ಹಳ್ಳಿಯಲ್ಲಿ ಈ ಗೊಂಬೆಗಳನ್ನು ತಯಾರಿ ಮಾಡುವ ಕುಟುಂಬಗಳಿವೆ. ಕರ್ನಾಟಕದಲ್ಲಿ ಈಗ ಈ ಗೊಂಬೆಗಳನ್ನು ವಿನ್ಯಾಸ ಮಾಡುವವರು ತುಂಬಾ ಕಡಿಮೆ. ಆಧುನಿಕ ಅನುಸಂಧಾನಗಳು ಈ ಮಾಧ್ಯಮದಲ್ಲಿ ನಡೆದದ್ದು ತುಂಬಾ ಕಡಿಮೆ. ಡಾ. ಪ್ರಕಾಶ ಗರುಡರ 'ಗೊಂಬೆಮನೆ' ಸಂಸ್ಥೆ ಈ ಮಾಧ್ಯಮದಲ್ಲಿ ಆಧುನಿಕ ಪ್ರಯೋಗ ನಡೆಸಿ ಈ ಗೊಂಬೆಗಳ ವಿನ್ಯಾಸಕ್ಕೆ ಹೊಸತನ ನೀಡಿದ್ದಾರೆ. ಚರ್ಮ ತುಂಬಾ ಬಾಳಿಕೆ ಬರುವುದರಿಂದ ಈಗಲೂ ಇದನ್ನೇ ಉಪಯೋಗಿಸುವ ರೂಢಿ ಇದೆ. ಜಿಂಕೆ ಚರ್ಮ ಬಳಕೆ ಈಗ ಕಾನೂನು ಬಾಹಿರವಾದುದರಿಂದ ಆಡಿನ ಅಥವಾ ಒಂಟೆ ಚರ್ಮದ ಬಳಕೆ ಈಗ ಹೆಚ್ಚಾಗಿ ಮಾಡುತ್ತಾರೆ.





ಚರ್ಮದ ಮೇಲೆ ಗೊಂಬೆ ಚಿತ್ರ ಬಿಡಿಸುತ್ತಿರುವುದು



ಪಾರಂಪರಿಕ ತೊಗಲುಗೊಂಬೆಯ ಮುಖದ ಒಚಿದು ವಿನ್ಯಾಸ

- ಪ್ರಸ್ತುತ ಕೈಪಿಡಿಯಲ್ಲಿ ಬರುವ ಎರಡೂ ತೊಗಲು ಗೊಂಬೆ ಆಟಗಳಿಗೆ ಗೊಂಬೆಗಳ ವಿನ್ಯಾಸಕ್ಕೆ ಹದ ಮಾಡಿದ ಆಡಿನ ಚರ್ಮವನ್ನು ಬಳಸಲಾಗಿದೆ.
- ಒಂದು ಚರ್ಮಕ್ಕೆ ಸುಮಾರು ರೂ. 300ರಿಂದ 500.00ರವರೆಗೆ ಬೆಲೆ ಇದೆ. ಅಳತೆಗೆ ತಕ್ಕಂತೆ ಒಂದು ಚರ್ಮ ಸುಮಾರು 1 1/2 ಅಡಿ ಅಗಲವಾಗಿರುತ್ತದೆ. ಆಂಧ್ರ ಪ್ರದೇಶದ ಧರ್ಮಾವರಂ ತಾಲೂಕಿನ ನಿಮ್ಮಲಕುಂಟಾ ಎಂಬ ಹಳ್ಳಿಯಲ್ಲಿ ಈ ಚರ್ಮ ದೊರೆಯುತ್ತದೆ.
- ಒಂದು ಚರ್ಮದಲ್ಲಿ ಪ್ರಸ್ತುತ ಕಥೆಗಳಿಗಾಗಿ 2ರಿಂದ 3 ಗೊಂಬೆಗಳನ್ನು ಮಾಡಿಕೊಳ್ಳಲಾಗಿದೆ.
- 10 ಗೊಂಬೆಗಳಿರುವ ಒಂದು ತೊಗಲುಗೊಂಬೆ ಆಟಕ್ಕೆ ಚರ್ಮದ ಖರ್ಚು, ವಿಶುವಲ್ ಆರ್ಟಿಸ್ಟ್ ಸಂಭಾವನೆ ಸೇರಿ ಸುಮಾರು 15 ಸಾವಿರ ಖರ್ಚು ಬರುತ್ತದೆ. ಇದರಲ್ಲಿ ಪರದೆ ಗೊಂಬೆ ಮನೆಗೆ ಬೇಕಾದ ಸಾಮಗ್ರಿ ಹಾಗೂ ಬೆಳಕಿನ ವ್ಯವಸ್ಥೆಯ ಖರ್ಚು ಸೇರುವುದಿಲ್ಲ.
- ವೃತ್ತಿಪರ ಸಿದ್ಧ ಗೊಂಬೆ ಮನೆ ತಯಾರಿಕೆಗೆ ಸುಮಾರು 10 ಸಾವಿರ ರೂಪಾಯಿ ಖರ್ಚು ಬರುತ್ತದೆ.

ಗೊಂಬೆಗಳನ್ನು ಬಣ್ಣದ ಜಿಲೆಟಿನ್ ಕಾಗದ ಹಾಗೂ ಕಾರ್ಡ ಶೀಟ್ ಬಳಸಿ ಕೂಡಾ ಮಾಡಬಹುದು. ಮೊದಲು ಕಾರ್ಡ ಶೀಟ್ ಮೇಲೆ ಬೇಕಾದ ಚಿತ್ರಗಳನ್ನು ಕಾರ್ವ್ ಮಾಡಿ ಕಾರ್ವ್ ಮಾಡಿದ ಜಾಗದಲ್ಲಿ ಬೇಕಾದ ಬಣ್ಣದ ಜಿಲೆಟಿನ್ ಕಾಗದ ಅಂಟಿಸಿ ಅದರ ಮೇಲೆ lamination ರೀತಿಯಲ್ಲಿ ಪಾರದರ್ಶಕವಾದ ಪ್ಲಾಸ್ಟಿಕ್ ಶೀಟ್ ಅಂಟಿಸಿ ಬಿದರಿನ ಕಡ್ಡಿ ಹಾಕಿ ಗೊಂಬೆಗಳನ್ನು ತಯಾರಿಸಿಕೊಳ್ಳಬಹುದು. ಗೊಂಬೆ ತಯಾರಿಕೆಯ ಖರ್ಚನ್ನು ಕಡಿಮೆ ಮಾಡಿಕೊಳ್ಳಲು ಈ ರೀತಿಯ ಗೊಂಬೆ ತಯಾರಿಕೆ ವಿಧಾನ ಅನುಕೂಲವಾದದ್ದು.

ಮಕ್ಕಳಿಗಾಗಿ ಕಾರ್ಡಬೋರ್ಡು ಹಾಗೂ ಬಣ್ಣಬಣ್ಣದ ಜಿಲೆಟಿನ್ ಹಾಳೆ ಉಪಯೋಗಿಸಿ ಗೊಂಬೆಗಳ ವಿನ್ಯಾಸದ ತರಬೇತಿ ಕೊಡಬಹುದು. ಚರ್ಮದ ಮೇಲೆ ವಿನ್ಯಾಸ ಮಾಡುವಾಗ ಚರ್ಮದ ಎರಡೂ ಬದಿಗೆ ತದ್‌ವತ್ ವಿನ್ಯಾಸವನ್ನು ಮಾಡುವ ರೂಢಿ ಇದೆ. ಎರಡು ಕಾರ್ಡಬೋರ್ಡ್ ಶೀಟ್ ಮಧ್ಯದಲ್ಲಿ ಜಿಲೆಟಿನ್ ಕಾಗದ ಅಂಟಿಸಿ ನಮಗೆ ಆಕರ್ಷಣೀಯವಾಗಿ ಕಾಣುವ ಭಾಗವನ್ನು ಟ್ರಾನ್ಸಪರೆಂಟ್ ಮಾಡಬಹುದು.

      

# 1.3 ಎಲ್ಲ ಮಕ್ಕಳೂ ನಮ್ಮವರೆ

(All Children are ours)

(ಸಲಾಕೆ ಹಾಗೂ ಕೈಗವಸು ಗೊಂಬೆಯಾಟ A Rod and Glove Puppet Play)







ನಾಟಕ ರಚನೆ : ಡಾ. ಪ್ರಕಾಶ ಗರೂಡ
ಗೊಂಬೆಗಳ ರಚನೆ : ಮುರಾರಿ ಕಾಸರಗೂಡು, ರಜನಿ ಗರೂಡ
ಸಂಗೀತ : ನಾಗರಾಜ ಹೆಗಡೆ
ಅವಧಿ : 25 ನಿಮಿಷ

        

# ಪಾತ್ರ ಪರಿಚಯ













**ರಾಕ್ಷಸ** : ಯಕ್ಷಗಾನ ಅಥವಾ ಯಾವುದಾದರೂ ಕಾಲ್ಪನಿಕ ರಾಕ್ಷಸ ಪಾತ್ರಧಾರಿಯ ಗೊಂಬೆ.

**ಮಾಲತಿ :** (ಕಾರ್ಯಕರ್ತೆ) ಸಮಾಜ ಕಾರ್ಯಕರ್ತೆ, ವಯಸ್ಸು 30–35, ಹಸಿರು ಬಾರ್ಡರಿನ ಬಿಳಿಸೀರೆ ಹಸಿರು, ಬಿಳಿ ಕುಪ್ಪಸ ಅಥವಾ ಚೂಡಿದಾರ ಒಂದೇ ಕೈಗೆ ಚಲನೆ.

**ಗೌಡ್ರು** : ವಯಸ್ಸು ಸುಮಾರು 55–60 ರುಮಾಲು, ಕೋಟು, ದಪ್ಪ ಮೀಸೆ, ಗಂಭೀರ ಕಳೆ.

**ಕಾರ್ಯಕರ್ತೆಯರ ಸಹಾಯಕರು** : 3 ಜನ, ಜನರ ಗುಂಪಿಗೂ ಇವರನ್ನು ಬಳಸಬಹುದು.

**ಘಂಗ** : ಶಹರದ ಪಕ್ಕ ಫಡಘೋಷಿ 25–30 ವಯಸ್ಸು ಕೊರಳಲ್ಲಿ ಸ್ಕಾರ್ಫ, ಗುಂಡಾ ರೀತಿ ಕಾಣುತ್ತಾನೆ.

**ಟಿಂಗ** : ಹೆಚ್ಚು ಕಡಿಮೆ ಲಫಂಗನ ರೀತಿಯ ವೇಷ. ಬಣ್ಣದಲ್ಲಿ ಬದಲಾವಣೆ ಮಾಡಿಕೊಳ್ಳಬಹುದು.

**ಗಂಡ** : 30–35 ವಯಸ್ಸು ಶಹರದ ಐಟಿ.ಬಿಟಿ ಕಂಪನಿಯಲ್ಲಿ ಕೆಲಸ ಮಾಡುವಾತ ನೀಟಾದ ಪ್ಯಾಂಟು, ಶರ್ಟು, ಟೈ ಕಟ್ಟಿದ್ದಾನೆ.

**ಉಷಾ(ಹೆಂಡತಿ):** 25–30 ವಯಸ್ಸು ಶಹರದ ಸುಧಾರಿತ ಮಹಿಳೆ ರೀತಿ ವೇಷ

**ಸರಸ್ವತಿ** : 12–13 ವಯಸ್ಸು, ಲಂಗ, ಬ್ಲೌಸು ತೊಟ್ಟಿದ್ದಾಳೆ. ಕೆಲಸದ ಹುಡುಗಿ

**ಹುಡುಗ** : ಉಷಾಳ ಮಗ 10–12 ವಯಸ್ಸು, ಶ್ರೀಮಂತ ಕಳೆ

**ಹುಡುಗಿ** : ಉಷಾಳ ಮಗಳು 8–10 ವಯಸ್ಸು ಶ್ರೀಮಂತ ಕಳೆ

# ಹಿನ್ನೆಲೆ ರಂಗ ಸಜ್ಜಿಕೆ:



- ಒಂದು ಆಲದ ಮರ,
- (ಲಫ್ ಮತ್ತು ಬ್ಲಫ್ ಆ್ಯಂಡ್ ಕಂಪನಿ ಎಂಬ ಬೋರ್ಡು, ಒಂದು ಸುಸಜ್ಜಿತ ಮನೆಯ ಚಿತ್ರ ಸಾಧ್ಯವಾದರೆ ಡೈನಿಂಗ್ ಟೇಬಲ್. ಕಾರ್ಡ್‌ಶೀಟ್‌ನಲ್ಲಿ ತಯಾರಿಸಬಹುದು.) (ಈ ಹಿನ್ನೆಲೆ ರಂಗಸಜ್ಜಿಕೆಯನ್ನು ಬಟ್ಟೆಯ ಮೇಲೂ ಚಿತ್ರಿಸಬಹುದು.)

# ರಂಗಸಜ್ಜಿಕೆ ಮತ್ತು ರಂಗ ಪ್ರಯೋಗ

ಎರಡು ಟೇಬಲ್ಲಿಗೆ ದಪ್ಪವಾದ ಕೋಲುಗಳನ್ನು ಎರಡೂ ಬದಿಗೆ ಕಟ್ಟಿ ಸುಮಾರು 6 ಅಡಿ ಅಗಲದ ಹಾಗೂ 3 ಅಡಿ ಎತ್ತರದ ಒಂದು ಪರದೆಯನ್ನು ಅಡ್ಡವಾಗಿ ಕಟ್ಟಿ ವೇದಿಕೆ ಸಿದ್ಧಪಡಿಸಿಕೊಳ್ಳಬೇಕು. ಫ್ರೇಮ್ ರೀತಿ ಆಯತಾಕಾರದ ಚಿಕ್ಕ ಚಿತ್ರ ಚೌಕಟ್ಟು (ಪ್ರೊಸೀನಿಯಂ) ಮಾದರಿಯ ರಂಗಸ್ಥಳವನ್ನು ಸಿದ್ಧ ಮಾಡಿಕೊಳ್ಳಬಹುದು. ನಿಂತು ಗೊಂಬೆ ಆಡಿಸುತ್ತಿದ್ದರೆ ರಂಗದ ಕೆಳಭಾಗವನ್ನು 3 ಅಡಿಗಿಂತ ಜಾಸ್ತಿ ಎತ್ತರಿಸಿ ಬಟ್ಟೆಯನ್ನು ನಟರು ಮರೆಯಾಗುವಂತೆ ಕಟ್ಟಬೇಕು. ನಟರ ಹಿಂದಿನ ಜಾಗ ಸುಮಾರು 5–6 ಅಡಿ ಸ್ಥಳಾವಕಾಶ ಇಟ್ಟುಕೊಂಡರೆ ಗೊಂಬೆ ಆಟಗಾರರು ಮುಕ್ತವಾಗಿ ಓಡಾಡಿ ಗೊಂಬೆ ಆಡಿಸಬಹುದು. ವಿಂಗ್ಸ್ ಸ್ಪೇಸ್‌ಗೆ ಸ್ವಲ್ಪ ಸ್ಥಳಾವಕಾಶ ಇಟ್ಟುಕೊಂಡರೆ ಗೊಂಬೆಗಳ ಎಂಟ್ರಿ ಮತ್ತು ಎಕ್ಸಿಟ್‌ಗೆ ಅನುಕೂಲವಾಗುವುದು. ಈ ಆಟಕ್ಕೆ ರಾತ್ರಿ ಮಾತ್ರ ಬೆಳಕಿನ ವ್ಯವಸ್ಥೆಯನ್ನು ಮಾಡಿಕೊಳ್ಳಬಹುದು. ಹಗಲು ಹೊತ್ತಿನಲ್ಲಿ ಬೆಳಕಿನ ಅವಶ್ಯಕತೆ ಈ ಆಟಕ್ಕೆ ಅಷ್ಟು ಇಲ್ಲ. ರಂಗದ ಮುಂದಿನಿಂದಲೂ ಬೆಳಕು ಕೊಡಬಹುದು. ಹಾಗೆ ಮೇಲುಗಡೆಯಿಂದಲೂ ಬೆಳಕಿನ ಆಕರವನ್ನು ಸಿದ್ಧಪಡಿಸಿಕೊಳ್ಳಬಹುದು.

ಈ ಆಟವನ್ನು ಸುಲಭವಾಗಿ ಒಂದು ಕ್ಲಾಸ್‌ರೂಂನಲ್ಲಿ ಆಡಬಹುದು. ಬುಕ್‌ಫ್ಲಾಟ್ ಮಾದರಿಯ ಫೋಲ್ಡ್ ಮಾಡಲು ಬರುವಂತಹ ರೆಡಿಮೇಡ್ ಕಬ್ಬಿಣ ಸಲಾಕೆಯ ಅಥವಾ ಕಟ್ಟಿಗೆಯಲ್ಲಿ ಮಾಡಿದ ರಂಗ ಸಜ್ಜಿಕೆಯನ್ನು ಸಿದ್ಧಪಡಿಸಿ ಕೊಳ್ಳಬಹುದು.

ನಟರ ಸಂಖ್ಯೆ 3ರಿಂದ 5 ಜನರು ಇರಬೇಕು. ಹೆಚ್ಚಿಗೆ ಇದ್ದರೂ ನಡೆಯುತ್ತದೆ. ಆದರೆ ರಂಗ ಸಜ್ಜಿಕೆಯಲ್ಲಿ ಗೌಜಾಗಬಾರದು, ಹಾಗೆ ಗೊಂಬೆ ಆಟಗಾರರ ಸಂಖ್ಯೆಯನ್ನು ನಿಗದಿಪಡಿಸಬೇಕು. ಮೇಳ (ಕೋರಸ್) ಕೂಡಾ ಈ ಆಟಕ್ಕೆ ಅವಶ್ಯವಾಗಿರಬೇಕು. ಆಟದ ಕೆಲ ಪಾತ್ರಗಳ ಮಾತುಗಳನ್ನು ಮೇಳದ ನಟರಿಗೆ ಹಂಚಬಹುದು. ಈ ಆಟವನ್ನು ಯಾವ ರಂಗ ಸಜ್ಜಿಕೆಯೂ ಇಲ್ಲದೇ ಕೇವಲ ಆಯಾ ಪಾತ್ರದ ಗೊಂಬೆಗಳನ್ನು ಇಟ್ಟುಕೊಂಡು ಚಿತ್ರ ಕಥಾ ಕಥನದ ರೀತಿಯಲ್ಲೂ ಆಟ ಕಟ್ಟಬಹುದು. ಇದಕ್ಕೆ ಗೊಂಬೆ ಆಟಗಾರರು ಕುಳಿತುಕೊಳ್ಳುವ ಜಾಗ ಸ್ವಲ್ಪ ಎತ್ತರದಲ್ಲಿದ್ದರೆ ಸಾಕು. ಆಟಗಾರರ ಎದುರಿಗೆ ಸೆಮಿಸರ್ಕಲ್‌ನಲ್ಲಿ ವೀಕ್ಷಕರು ಕುಳಿತುಕೊಳ್ಳಬಹುದು.

# ಸಂಗೀತ ಮತ್ತು ಹಾಡುಗಳ ಬಳಕೆ

'ಗೊಂಬೆ ಗಣೇಶನ ನ್ಯಾಯ' ಈ ಗೊಂಬೆ ಆಟದಲ್ಲಿ ಬಳಕೆಯಾದಂತೆ ಸಂಗೀತ ಮತ್ತು ಹಾಡುಗಳ ಬಳಕೆಯನ್ನು ಈ ಕಥೆಯ ತಕ್ಕಂತೆ ಬದಲಾವಣೆ ಮಾಡಿಕೊಂಡು ಬಳಕೆ ಮಾಡಬೇಕು.



# ಎಲ್ಲ ಮಕ್ಕಳೂ ನಮ್ಮವರೆ

## ದೃಶ್ಯ 1

(ಒಂದು 4'X2' ಅಡಿ ಆಕಾರದ ಉದ್ದಗಲದ ಫ್ರೇಮ್ ಅಥವಾ ಕ್ಲಾಸ್‌ರೂಮಿನಲ್ಲಿರುವ ಎರಡು ಟೇಬಲ್ ಇಟ್ಟು ಪಾರ್ಶ್ವದಲ್ಲಿ ಕಪ್ಪು ಪರದೆಯಿಂದ ಮುಚ್ಚಿದ ರಂಗ ಸಜ್ಜಿಕೆ ಸಿದ್ಧಪಡಿಸಿಕೊಳ್ಳಬೇಕು. ಆ ಫ್ರೇಮಿನೊಳಗೆ ನೀಲಿ ಲೈಟು ನಿಧಾನವಾಗಿ ಬರುತ್ತದೆ. ಬೆಳಗಿನ ಹೊತ್ತಿನಲ್ಲಿ ಪ್ರದರ್ಶನ ಮಾಡಿದರೆ ಈ ಲೈಟಿನ ಅವಶ್ಯಕತೆ ಇಲ್ಲ. ಆ ಫ್ರೇಮಿನಲ್ಲಿ ನಾಲ್ಕಾರು ಚಿಕ್ಕ ಚಿಕ್ಕ ಹ್ಯಾಂಡ ಗೊಂಬೆಗಳು ತಲೆ ಎತ್ತುತ್ತವೆ. ಅವುಗಳಲ್ಲಿ 2 ಹೆಣ್ಣು, ಮಿಕ್ಕವು ಗಂಡು ಗೊಂಬೆಗಳಾಗಿರಬಹುದು. ಹಿನ್ನೆಲೆಯಲ್ಲಿ ತಾಳದ ಒಂದೊಂದು ಸ್ಟ್ರೋಕ್ ಒಬ್ಬೊಬ್ಬರ ಮಾತು ಆಡಿ ಮುಗಿಸಿದ ಮೇಲೆ  ಕೊಡಬಹುದು. ಹೆಣ್ಣು ಹಾಗೂ ಗಂಡು ಧ್ವನಿ ಮಿಶ್ರಿತದಲ್ಲಿ  ಅನುಕ್ರಮವಾಗಿ ಮತ್ತು ಆರಂಭವಾಗುತ್ತವೆ).

**ಹೆಣ್ಣು ಧ್ವನಿ :** ಮಕ್ಕಳು ಪ್ರೀತಿ ಮತ್ತು ಶಾಂತಿಯ ಪ್ರತೀಕ. ಮಕ್ಕಳು ದೇವರ ಸ್ವರೂಪವಾಗಿ ಕಂಡು ಅವರಿಗೆ ತೋರುವ ಪ್ರೀತಿ ಮತ್ತು ವಿಶ್ವಾಸ ದೇವರಿಗೆ ತೋರಿಸುವ ಪ್ರೀತಿಯೆಂದು ಜಗತ್ತಿನ ಎಲ್ಲ ಧರ್ಮದವರೂ ನಂಬುತ್ತಾರೆ.

**ಗಂಡು ಧ್ವನಿ :** ಮಕ್ಕಳನ್ನು ವಯಸ್ಕರ ಜೊತೆ ಹೋಲಿಸಿದರೆ ಶಾರೀರಿಕವಾಗಿ ದುರ್ಬಲರಿದ್ದು ಅವರು ಅನೇಕ ರೀತಿಯ ಕೆಲಸದಲ್ಲಿ ಲೈಂಗಿಕತೆಯಲ್ಲಿ ಶೋಷಣೆಗೊಳಗಾಗುತ್ತಾರೆ.

**ಹೆಣ್ಣು ಧ್ವನಿ :** ಪ್ರಾದೇಶೀಕ ಮತ್ತು ಸಾಮಾಜಿಕವಾಗಿ ಗಮನಿಸಿದರೆ ಮಕ್ಕಳ ಶೋಷಣೆಯು, ಎಲ್ಲಾ ಕಾಲದಲ್ಲಿಯೂ ಎಲ್ಲಾ ಸಮಯ ದಲ್ಲಿಯೂ ಕಂಡು ಬರುತ್ತದೆ.

**ಗಂಡು ಧ್ವನಿ :** ಮಕ್ಕಳ ಮೇಲಿನ ಈ ಶೋಷಣೆ ತಡೆಯಲು ನಮ್ಮ ಸಮಾಜ ಮೊದಲಿನಿಂದಲೂ ಯೋಚಿಸುತ್ತಿತ್ತು. ಆ ಯೋಚನೆಗೆ ಸ್ವಲ್ಪ ರೂಪ ಬಂದಿದ್ದು, ಕಳೆದ ಎರಡು ಶತಮಾನಗಳಿಂದೀಚೆಗೆ, ಮಕ್ಕಳು ನ್ಯಾಯಿಕವಾಗಿ ರಕ್ಷಣೆ ಹೊಂದಬೇಕು ಎಂದು ನಮ್ಮ ವಿಶ್ವ ಮಾನವ ಹಕ್ಕುಗಳು ಪ್ರತಿಪಾದಿಸುತ್ತವೆ.

**ಹೆಣ್ಣು ಧ್ವನಿ :** ಮಕ್ಕಳ ಹಕ್ಕುಗಳ ಉಲ್ಲಂಘನೆ ಅವರನ್ನು ಕೂಲಿಗೆ, ಲೈಂಗಿಕ ಶೋಷಣೆಗೆ ತಳ್ಳುವುದು. ನಮ್ಮ ಜಮೀನ್ದಾರಿ ಪದ್ಧತಿಯಲ್ಲಿ ಅಲ್ಲಲ್ಲಿ ಕಾಣಿಸಿಕೊಂಡಿದ್ದರೂ ನಮ್ಮ ಸಮಾಜ ಕಂಡ ಔದ್ಯೋಗಿಕ ಕ್ರಾಂತಿಯಿಂದಾಗಿ ಅದರ ಸಾಮಾಜಿಕ ಆರ್ಥಿಕ ಪ್ರಗತಿಯ ಜೊತೆಗೆ ಅದೇ ಕ್ರಾಂತಿ ಬಾಲಕಾರ್ಮಿಕ ಪದ್ಧತಿಯನ್ನೂ ಹುಟ್ಟು ಹಾಕಿತು. ಅದರ ನಿರ್ಮೂಲನೆಯೇ ನಮ್ಮ ನಿಮ್ಮೆಲ್ಲ ಸಾಮಾಜಿಕ ಜವಾಬ್ದಾರಿ. (ಫ್ಯಾಕ್ಟರಿ, ಬೋಂಗಾ ಶಬ್ದದ ಜೊತೆಗೆ ಕೆಲಸ ಕಾರ್ಖಾನೆಗಳ ಚಿಕ್ಕಮಟ್ಟ ಕಟೌಟ್ ಕಾಣಿಸಿಕೊಳ್ಳುತ್ತವೆ. ಈಗಿದ್ದ ಮಕ್ಕಳ ಮೇಲೆ ಒಂದು ಕರಿ ಛಾಯೇ ಬೀಳುತ್ತದೆ. ಆ ಕರಿ ಛಾಯೆಯನ್ನು ಒಂದು ಕಪ್ಪು ಬಟ್ಟೆಯಿಂದಾದರೂ ತೋರಿಸಬಹುದು. ನಿಧಾನವಾಗಿ ಆ ಗೊಂಬೆಗಳು ಮಾಯವಾಗುತ್ತವೆ. ಚೀರಾಟ-ಕೂಗಾಟ, ಒಂದು ಘೋರಾಕೃತಿಯ ವಿವಿಧ ವಸ್ತ್ರಾಲಂಕೃತದ ಗೊಂಬೆ ಫ್ರೇಮಿನ ಮಧ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ಅದು ರಂಗದ ತುಂಬ ಕೇಕೆ ಹಾಕುತ್ತಾ ಕುಣಿದಾಡುತ್ತದೆ).



ರಾಕ್ಷಸ : ಓ. . . .ಓ. . . . ನಾನು ಯಾರಂತ ತಿಳಿದಿದ್ದೀರಿ?

ಧ್ವನಿ : ತಾವು ಯಾರು ಸ್ವಾಮಿ? (ತಟ್ಟನೆ ಸಮಾಜ ಕಾರ್ಯಕರ್ತೆಯರ ಮಾದರಿಯಲ್ಲಿ ಒಂದು ಗೊಂಬೆ ರಂಗದಲ್ಲಿ ಕಾಣಿಸಿಕೊಳ್ಳುತ್ತದೆ ಅದು ಆಕೃತಿಯಲ್ಲಿ ಆ ರಾಕ್ಷಸ ಗೊಂಬೆಗಿಂತಲೂ ಚಿಕ್ಕದು) ಇಲ್ಲಿ ನೆರೆದಂತಹ ಜನರಿಗೆ ಮಕ್ಕಳು ಹಕ್ಕು ರಕ್ಷಣೆ, ಬಾಲಕಾರ್ಮಿಕರ ಪದ್ಧತಿ ನಿರ್ಮೂಲನೆ ಕುರಿತು ಅರಿವು ನೀಡುತ್ತಿದ್ದಾಗ ಈ ಸಭೆಗೆ ಬಂದು ಗದ್ದಲ ಮಾಡಲು ಕಾರಣವೇನು?

ರಾಕ್ಷಸ : ಓ. . . .ಓ. . . . ಹೊ. . ಹೊ. . . . ನಾನು ರಾಕ್ಷಸ ಆಧುನಿಕ ಮನುಷ್ಯನ ಮನಸ್ಸಿನಲ್ಲಿ ಬಗೆ ಬಗೆಯ ದುಷ್ಟ ಆಸೆಗಳನ್ನು ಸೃಷ್ಟಿಸಿ ಅವರ ಮನುಷ್ಯತ್ವ ಹಾಳು ಮಾಡುವಂತಹ ಬಾಲಕಾರ್ಮಿಕ ರಾಕ್ಷಸ. ಮಕ್ಕಳ ಮೂಲಭೂತ ಹಕ್ಕುಗಳನ್ನು ಧ್ವಂಸ ಮಾಡುವ ಕಂಟಕ.

ಕಾರ್ಯಕರ್ತೆ :ಕಂಟಕ ಮಹಾಶಯ ಎಲ್ಲಾ ರಾಕ್ಷಸ–ದಾನವರಿಗೆ ಒಚಿದು ಹುಟ್ಟು ಅಂತ ಇರುತ್ತೆ. ಗಿಮ್ಮ ಜನ್ಮ ರಹಸ್ಯವನ್ನು ಹೇಳು ಮಾರಾಯ

ರಾಕ್ಷಸ : **ಎಲ್ಲೆ ಹೆಂಗಸೆ ನಾನು ಹುಟ್ಟಿದ್ದು ನಿಮ್ಮ ಮಧ್ಯದಲ್ಲೇ.**

ಕಾರ್ಯೆಕರ್ತೆ :ಅಂದರೆ?

ರಾಕ್ಷಸ : ನಿಮ್ಮ ಕೊಳಕು ಸಮಾಜದಲ್ಲಿ ಹಣದ ದಾಹ ಇರುವ ಮನುಷ್ಯರ ಮನಸ್ಸಿನಲ್ಲಿ ಲೈಂಗಿಕ ಶೋಷಣೆ ಮಾಡುವ ವಿಕೃತ ಕಾಮಿಗಳ ಅಂತರಂಗದಲ್ಲಿ, ತಮ್ಮ ಐಶ್ವರ್ಯ ಹೆಚ್ಚಿಸಿಕೊಳ್ಳಲು ಚಿಕ್ಕಮಕ್ಕಳನ್ನು ಕದ್ದೊಯ್ದು ವೇಶ್ಯಾವಾಟಿಕೆಗೆ ಮಾಡುವ ಪುತನಿ ಹೆಂಗಸರ ಹೃದಯದಲ್ಲಿ ನನ್ನ ಸ್ಥಾನ ಮತ್ತು ಹುಟ್ಟು ಇರುವುದು ತಿಳಿಯಿತೇ.

ಕಾರ್ಯಕರ್ತೆ :ಹಾಂ. . . ಹಾಂ. . . ತಿಳಿಯಿತು ತಿಳಿಯಿತು. ಇತ್ತೀಚೆಗೆ ನಮ್ಮ ದೇಶದ ನಿಥಾರಿಯಾ ಎಂಬ ಹಳ್ಳಿಯಲ್ಲಿ ಮೂವತ್ತಕ್ಕೂ ಹೆಚ್ಚು ಮಕ್ಕಳನ್ನು ಲೈಂಗಿಕವಾಗಿ ಶೋಷಣೆ ಮಾಡಿ, ನಿರ್ದಯವಾಗಿ ಕೊಲೆಗೈದ ಶ್ರೀಮಂತ ಮೋಹಿಂದರ ಸಿಂಗ್ ಪಾಂಢೆರಾ ಹಾಗೂ ಆತನ ಸೇವಕ ಸುರಿಂದರ್ ಕೋಲಿ ಇವರ ಮನಸ್ಸಿನೊಳಗೆ ಪ್ರವೇಶ ಮಾಡಿದ ಘೋರ ರಾಕ್ಷಸ ನೀವೇ ಏನು?

ರಾಕ್ಷಸ : ಸರಿಯಾಗಿ ಹೇಳಿದೆ. ಆ ಘೋರ ಕಂಟಕ ನಾನೆ.

ಕಾರ್ಯಕರ್ತೆ :ಏ ಅನಿಷ್ಟ ಮುಂಡೇದೆ ನಿನ್ನ ಆಟ ನಮ್ಮ ನಾಡಿನಲ್ಲಿ ನಡೆಯುವುದಿಲ್ಲ. ಇಲ್ಲಿಯ ಜನ ಗುಗ್ಗುಗಳು ಅಂತ ತಿಳಿಯಬೇಡ. ಮಕ್ಕಳ ಮೇಲಾಗುವ ದೌರ್ಜನ್ಯದ ಬಗ್ಗೆ ಅವರು ಎಚ್ಚರಾಗುವ ಕಾಲ ಈಗ ಪಕ್ವವಾಗಿದೆ. ತೆಪ್ಪಗೆ ತೆರಳು ಇಲ್ಲಿಂದ, ಇಲ್ಲವಾದರೆ ನಿನಗೆ ಕಸಬರಿಗೆ ಪೂಜೆ ಮಾಡೋದು ಖಂಡಿತ.

ರಾಕ್ಷಸ : ಹೂಂ . . . ಹೂಂ . . . ಸಾಧ್ಯವಿಲ್ಲ ನಾನು ಇಲ್ಲಿಯ ಜನರ ಮನಸ್ಸಿನಲ್ಲಿ ಪ್ರವೇಶಿಸಿ ಮಕ್ಕಳ ಶೋಷಣೆಗೆ ಅವರನ್ನು ಪ್ರಚೋದಿಸುತ್ತೇನೆ. ಹ್ರೂಂ . . . ಹ್ರೂಂ . . . ಹ್ರೂಂ . . . ಅಕಲಕ . . . ಬಕಲಕ . . .ಧೂಂ . . . ಧಾಂ . . .

ಕಾರ್ಯಕರ್ತೆ :ಎಲ್ಲಿ ನಮ್ಮ ಕಾರ್ಯಕರ್ತೆಯರು ಕಸಬರಿಗೆ ತನ್ನಿ ಈ ರಾಕ್ಷಸನಿಗೆ ಸರೀ ಶಾಸ್ತಿ ಮಾಡಿ 'ಹೋ ಎಂದು ಕೂಗುತ್ತ' (ನಾಲ್ಕೈದು ಕಸಪೊರಕೆ ಹಿಡಿದ ಗೊಂಬೆಗಳ ಪ್ರವೇಶ, ರಾಕ್ಷಸನನ್ನು ಓಡಿಸುತ್ತಾರೆ. ಆತ ವಿಕಾರವಾಗಿ ಕೂಗುತ್ತಾ ತೊಲಗುತ್ತಾನೆ. ಫ್ರೇಮಿನಲ್ಲಿ ನಿಶ್ಯಬ್ದ ವಾತಾವರಣ ಕಾರ್ಯಕರ್ತೆಯ ಗೊಂಬೆ ಪ್ರತ್ಯಕ್ಷ).

ಕಾರ್ಯಕರ್ತೆ :ಹೀಗೆ ನೋಡ್ರಿ, ನಾವು ಯಾವುದೇ ಊರಿಗೆ ಹೋಗಿ ಆಟಾ ಮಾಡೋಕೆ ಶುರು ಮಾಡಿದ ತಕ್ಷಣ ಈ ರಾಕ್ಷಸ ಗೊಂಬೆ ಬಗೆ ಬಗೆ ವೇಷದಿಂದ ಮಧ್ಯ ಪ್ರವೇಶಿಸಿ ಗಲಾಟೆ ಮಾಡೋಕೆ ಶುರು ಮಾಡೋದು ನಮ್ಮ ಜನರಿಂದ ಕಸಪೊರಕೆ ಏಟ ತಿಂದು ಹೋಗೋದು ಇದು ನಡೆದೇ ಇದೆ. ಅರೆ ಇಲ್ಯಾರೋ ಯಜಮಾನ್ರು ರಂಗ ಪ್ರವೇಶ ಮಾಡ್ತಾ ಇದ್ದಾರಲ್ಲ . . . (ರುಮಾಲು ಸುತ್ತಿದ ಓರ್ವ ಹಳ್ಳಿ ಗೌಡ್ರ ಮಾದರಿಯ ಗೊಂಬೆ ಪ್ರವೇಶ) ನಮಸ್ಕಾರ ಯಜಮಾನ್ರಿಗೆ.

ಗೌಡ್ರು : ನಮಸ್ಕಾರ್ರಿ ಅಕ್ಕಾರ . . . . ನಮ್ಮೂರಿಗೆ ನೀವು ಈ ಹೊಸಾ ಗೊಂಬೆ ಆಟಾ ಆಡಾಕ ತಂದದ್ದು ಭಾಳ ಖುಷಿ ಆತು . . . . ಹಿಂದಕ ಅದ್ಯಾರೊ ಗೊಂಬೆ ಗೌಡ್ರು ಅಂತ ರಾಣೆಬೆನ್ನೂರ ಕಡೆಯವರಂತ ನಮ್ಮೂರಿಗೆ ಗೊಂಬಿ ಆಡಸಾಕ ಬರ್ತಿದ್ರಂತ, ನನಗೂ ಅವರ ಮಹಾಭಾರತದ ಕಥಿ ಗೊಂಬಿ ಆಟಾ ಮಾಡಿ ಆಡಿದ್ದು ನೋಡಿದ್ದ ನೆನಪು, ಅದಾದ ಮ್ಯಾಲ ಈಗ ನೋಡ್ರಿ ಈ ಆಟಾ ನೋಡ್ತೀರೋದು.

ಮಾಲತಿ : ಹೌದಾ! ತುಂಬಾ ಸಂತೋಷ ಆತು.

ಗೌಡ್ರು : ಅಕ್ಕಾರ ಆ ರಾಕ್ಷಸ ನಿಮಗ್ಯಾಕಿಷ್ಟು ಹೆದರತಾನ. ನಿಮ್ಮ ಜನಾ ಕಸಬೊರಿಗಿ ತಗೊಂಡು ಬಂದ ತಕ್ಷಣ ಹ್ಯಾಂಗ ಓಡಿ ಹೋದಾ. ನಾನೂ ಅಲ್ಲೆ ಕಟ್ಟೆ ಮ್ಯಾಲ ಕುತಗೊಂಡು ನಿಮ್ಮ ಆಟಾ ನೋಡಾಕತ್ತಿದ್ದೆ ಇಂಥಾ ಘೋರ ರಾಕ್ಷಸ ಬರೇ ನಿಮ್ಮ ಕಸಬರಿಗೆ ಹೊಡತಕ್ಕೆ ಓಡಿ ಹೋಗೋದೊಂದು ಪವಾಡನ.

**ಮಾಲತಿ :** ಎಲ್ಲಿ ಪವಾಡ ಯಜಮಾನ್ರ, ನಿಮ್ಮ ಕಾಲದಾಗ ಮಕ್ಕಳ ಹಕ್ಕು ಮತ್ತ ಬಾಲಕಾರ್ಮಿಕರ ಪದ್ಧತಿ ಕುರಿತು ಕಾನೂನು ಅಷ್ಟು **ಮಜಬೂತ** ಇದ್ದಿದ್ದಿಲ್ಲಾ. ಇದ್ರು ಜನರಿಗೆ ಅದರ ಬಗ್ಗೆ ತಿಳುವಳಿಕೆ ಇದ್ದಿದ್ದಿಲ್ಲ, ಅದಕ್ಕ ಇಂಥಾ ರಾಕ್ಷಸರು ಯಾರಿಗೂ **ಹೆದರತಿದ್ದಿಲ್ಲಾ.** ಈಗ ಹಂಗಲ್ಲ ನೋಡ್ರಿ ಕಾನೂನಿನ ಬಗ್ಗೆ ಮಂದಿಗೆ ತಿಳುವಳಿಕೆ ಅದ. ಎಲ್ಲಿ ಜನರಿಗೆ ಆ ಕಾನೂನಿನ **ಬಗ್ಗೆ ತಿಳುವಳಿಕೆ** ಇಲ್ಲವೋ ನಮ್ಮ ಕಾರ್ಯಕರ್ತರು ಅದರ ಬಗ್ಗೆ ತಿಳುವಳಿಕೆ ಕೊಡತಾರ. ಕಾನೂನು ಭದ್ರವಾಗಿ ನಮಗ **ಬೆಂಬಲ** ಕೊಡೋದ್ರಿಂದನ ಇಂಥಾ ಬಾಲಕಾರ್ಮಿಕ ಪದ್ಧತಿಗೆ ಕುಮ್ಮಕ್ಕು ಕೊಡೋ ರಾಕ್ಷಸರು ನಮ್ಮ ಹತ್ರ ಸುಳಿಯೋದಿಲ್ಲ.

**ಗೌಡ :** ಹಿಂಜೇನ್ರಿ ಅಕ್ಕಾರ ಹಂಗಾದ್ರ ನಮ್ಮ ಜನರಿಗೂ ವಸಿ ಈ ಮಕ್ಕಳ ಹಕ್ಕು ಮತ್ತೆ ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆ ಕುರಿತು ಕಾನೂನು ಏನ ಹೇಳ್ತದ ತಿಳಿಸಿ ಹೇಳ್ರಲ್ಲ. ನೀವು ಆಡೊ ಮುಂದಿನ ಗೊಂಬೆ ಆಟಕ್ಕೆ ಒಂದು ಪುಟ್ಟ ಪೀಠಿಕೆ, ಮುನ್ನುಡಿ ಆದ್ಹಾಂಗ ಆಕ್ಷದ.

**ಮಾಲತಿ :** ಅದಕ್ಕೇನಂತೆ ಹಂಗ ಆಗಲಿ, ನೋಡ್ರಿ, ಗೌಡ್ರ ಅಂತರಾಷ್ಟ್ರೀಯ ಮಟ್ಟದಲ್ಲಿ ಮಕ್ಕಳ ಹಕ್ಕು ಕುರಿತು
ಒ೦ದು ಒಡಂಬಡಿಕೆ ಸೆಪ್ಟಂಬರ್ 2–1–1990ರಲ್ಲಿ ನಡಿತು. ನಮ್ಮ ದೇಶವೂ ಡಿಸೆಂಬರ್ 11–1992ರಲ್ಲಿ ಆ ಒಡಂಬಡಿಕೆಗೆ ತನ್ನ ಅನುಸಮರ್ಥನೆ ನೀಡಿತು.

**ಗೌಡ :** ಹೌದೇನ್ರಿ . . . . . ಆ ಒಡಂಬಡಿಕೆ ಏನ ಹೇಳ್ತದ್ರಿ.

**ಮಾಲತಿ :** ಆ ಒಡಂಬಡಿಕೆ ಪ್ರಕಾರ, ಮುಖ್ಯವಾಗಿ ಮಗು, ಅಂದರೆ 18 ವರ್ಷದ ಒಳಗಿನ ಎಲ್ಲಾ ಮಾನವ ಜೀವಿಗಳೂ, ಮಕ್ಕಳೆಂದು ಪರಿಗಣಿಸಲ್ಪಟ್ಟಿದ್ದು, ಯಾವುದೇ ಮಗು ಸ್ವಂತ ಅಭಿಪ್ರಾಯ ಹೊಂದುವ ಸಾಮರ್ಥ್ಯ ಹೊಂದಿದ್ದು ಆ ಅಭಿಪ್ರಾಯವನ್ನು ಅಭಿವ್ಯಕ್ತಿಪಡಿಸುವ ಹಕ್ಕಿರುತ್ತದೆ. ಅಂತಹ ಅಭಿಪ್ರಾಯಗಳಿಗೆ ಆ ಮಗುವಿನ ವಯಸ್ಸು ಮತ್ತು ಮಾನಸಿಕ ಬೆಳವಣಿಗೆಯನ್ನು ಗಣನೆಗೆ ತೆಗೆದುಕೊಂಡು ಅಭಿಪ್ರಾಯಗಳಿಗೆ ಪ್ರಾಮುಖ್ಯತೆ ನೀಡತಕ್ಕದ್ದು.

**ಗೌಡ :** ಹೌದಾ ಅಬಾಬಾಬಾ

**ಮಾಲತಿ :** ಹಾಗೆ ಮಗುವಿನ ಆರ್ಥಿಕ ಶೋಷಣೆಯಿಂದ ಮತ್ತು ಅದರ ಶಿಕ್ಷಣದಲ್ಲಿ ಹಸ್ತಕ್ಷೇಪವಾಗದೆ ಅಥವಾ ಅದರ ಶಾರೀರಿಕ ಮಾನಸಿಕ ಆಧ್ಯಾತ್ಮಿಕ, ನೈತಿಕ ಅಥವಾ ಸಾಮಾಜಿಕ ಬೆಳವಣಿಗೆಗೆ ಅಪಾಯಕಾರಿ ಆಗುವ ಯಾವುದೇ ರೀತಿಯ ಕೆಲಸ ಮಾಡುವುದನ್ನು ರಕ್ಷಿಸುವುದು.

**ಗೌಡ :** ಹೌದಲ್ರಿ . . . ನಮಗ ಗೊತ್ತೇ ಇರ್ಲಿಲ್ಲ ಬಿಡ್ರಿ. ನಮ್ಮ ಎಷ್ಟೋ ಹಳ್ಳಿ ಮಂದಿಗೆ ತಮ್ಮ ಮಕ್ಕಳಿಗೆ ಸಾಲಿ ಕಲಸಬೇಕಂತ ಖಬರ ಇರೋದಿಲ್ಲ ನೋಡ್ರಿ. ಸ್ವಲ್ಪ ಬೆಳೆದ ದೊಡ್ಡವಾದವಂದ್ರ ಜೀತಕ್ಕ ಬಿಡೋದು. ಕೂಲಿನಾಲಿಗೆ ಹಚ್ಚೋದು. ಇಲ್ಲಾ ಶಹರದಾಗ ಯಾವುದಾದ್ರೂ ಹೊಟೆಲ್ಲಿನಾಗೋ ಕಾಂಕ್ರೀಟ್ ಕೆಲಸಕ್ಕೆ ಹಚ್ಚೋದು ಮಾಮೂಲಾಗ ಬಿಟ್ಟೈತ್ರಿ. ಏನರಾ ಹಿಂಗ್ಯಾಕ್ರಿಪಾ!? ಅಂತ ಕೇಳಿದ್ರ, ಬಡತನ ಗೌಡ್ರೆ ಏನ ಮಾಡೋದ್ರಿ ಅಂತ ಕುಂಟ ನೆಪಾ ಹೇಳ್ತಾರ.

**ಮಾಲತಿ :** ಗೌಡ್ರ ನೀವ್ಹೇಳೋದು ನಿಜಾ. ಆದ್ರ ನಮಗ ಬಡತನಾ ಬಂದದ ಅಂತ ಪಾಪ ಮಕ್ಕಳನ್ನು ಸಾಲಿ ಬಿಡಿಸಿ ದುಡಿಯಾಕ ಹಚ್ಚೋದು ತಪ್ಪು. 1986ರಲ್ಲಿ ನಮ್ಮ ಸರ್ಕಾರ ಮಾಡಿದ ಕಾನೂನಿನ ಪ್ರಕಾರ ಯಾವ ಮಗು 14 ವರ್ಷದೊಳಗ ಇರ್ತದೋ ಅಂಥಾ ಮಗುವನ್ನು ಕೆಲಸಕ್ಕ ಇಟ್ಟಕೊಳ್ಳೋದಾಗಲೀ, ಕೆಲಸಕ್ಕೆ ಹಚ್ಚೋದಾಗಲೀ ಅಪರಾಧ ಅಂತ ಹೇಳ್ತದ. ಕನಿಷ್ಠ ವೇತನಾ ಕಾನೂನು 1948ರ ಪ್ರಕಾರ ಮನೆಗೆಲಸಕ್ಕೂ ಮಕ್ಕಳನ್ನು ಕೂಲಿ ಅಂತಾ ಬಳಸೋದು ತಪ್ಪು ಅಂತ ಹೇಳ್ತದ. ಅಷ್ಟ ಅಲ್ಲಾ 25,000/– ರೂಪಾಯಿ ಜುಲ್ಮಾನೆ ದಂಡವನ್ನು ಕೂಡಾ ಬಾಲಕಾರ್ಮಿಕ ಪದ್ಧತಿಗೆ ಪ್ರಚೋದನೆ ನೀಡಿದವರಿಗೆ ವಿಧಿಸಬಹುದು.



**ಗೌಡ :** ಅಕ್ಕಾರ ಭಾಳ ಛೋಲೋ ಆತು ನೋಡ್ರಿ. ನಿಮ್ಮ ಮಾತು ಕೇಳಿ ನಮ್ಮ ಮಂದಿ ಇನ್ನಾದ್ರೂ ಎಚ್ಚರಾಗಬೇಕು.

**ಮಾಲತಿ :** ಆಗೇ ಆಗ್ತಾರ. ಮಕ್ಕಳ ಮ್ಯಾಲೆ ಪ್ರೀತಿ ಯಾರಿಗೆ ಇರೋದಿಲ್ಲ ಹೇಳ್ರಿ. ಜನರು ಪರಿಸ್ಥಿತಿ ಒತ್ತಡಕ್ಕ ಬಿದ್ದು ತಮಗ ಅರಿವಿಲ್ಲದ ತಪ್ಪ ಮಾಡ್ತಾರ ಅಂಥವರು ಎಚ್ಚರಾಗಬೇಕು. ಇಂದಿನ ಮಕ್ಕಳು ನಾಳಿನ ಈ ದೇಶದ ಭವಿಷ್ಯ ಅನ್ನೋದನ್ನ ನಾವು ಮರೀಬ್ಯಾಡದು.

**ಗೌಡ :** ಏ . . . . . ಖರೆ ಅದ ನಿಮ್ಮ ಮಾತು. ಆಯಿತು ಅಕ್ಕಾರ ನಿಮ್ಮ ಅನುಭವಕ್ಕೆ ಬಂದ ಈ ಬಾಲಕಾರ್ಮಿಕ ಪದ್ಧತಿ ನಿರ್ಮೂಲನಾ ಕುರಿತು ಒಂದು ಸಣ್ಣ ಕಥೀನೂ ನಮ್ಮ ಜನಕ್ಕೆ ತೋರಿಸರಲ್ಲಾ. ಅಂದ್ರ ನಮ್ಮ ಜನಕ್ಕ ನೀವು ಹೇಳಿದ ಮಾತುಗಳು ಇನ್ನೂ ಸ್ಪಷ್ಟ ಆಗ್ತದ.

**ಮಾಲತಿ :** ಹಾಂಗ ಆಗಲಿ ನಾವು ಬಂದಿರೋದ ಅದಕ್ಕ ಒಂದು ಸಣ್ಣ ಆಟಾ ನೋಡೆ ಬಿಡ್ರೆಲ್ಲಾ. ನಮ್ಮ ಗೊಂಬೆ ಆಟದ ಪಾತ್ರಧಾರಿಗಳೆಲ್ಲಾ ರೆಡಿನಾ . . (ಧ್ವನಿ ಓ ರೆಡಿ ರೆಡಿ ರೆಡಿ ಎಂದು ಕೇಳಿ ಬರುತ್ತದೆ). ಹಾಗಾದ್ರೆ ಆಟ ಪ್ರಾರಂಭ ಮಾಡ್ರಿ.

# ದೃಶ್ಯ 2

(ಒಂದು ವಿದೇಶಿ music ನೃತ್ಯ ಮಾಡುತ್ತಾ ಫಂಗಾ, ಟಿಂಗಾ ಎಂಬ ಇಬ್ಬರ ಪ್ರವೇಶ ಅವರ ವೇಷ ವಿಚಿತ್ರವಾಗಿದೆ. ಒಂದು ಗೊಂಬೆಗೆ ಕರಿ ಚಶ್ಮಾ ಹಾಕಬಹುದು.)

## (ಕುಣಿತದ ಹಾಡು)

### ಫಂಗಾ–ಟಿಂಗಾ ನೃತ್ಯ

ಆ ಹಾ ಹಾ ಹಾ ಹಾ . . . . ಆ ಹಾ ಹಾ ಹಾ . . . . . . . ಹಾ ಹಾ
ಆ ಹಾ  ಆ ಹಾ ಹಾ  ಆ ಹಾ ಹಾ
ವ್ಹಾ ವ್ಹಾ . . . . . . ವ್ಹಾ ವ್ಹಾ . . . . . ವ್ಹ ವ್ಹ ವ್ಹಾ ವ್ಹಾ . . . . . .

ದಿಮಾಕಿನಿಂದ ಡಿಂಗಾಚಿಕ ಕುಣಿಯುತ
ಲಫಂಗ ಘಟಿಂಗ ಬಂದರೋ
ಲಫಂಗ ಘಟಿಂಗ ಬಂದರೋ
ಹೊಸ ಹೊಸ ಬಿಜನೆಸ್
ಯೋಜನೆ ಹಾಕುತ, ಗೋಲಮಾಲ
ಮಾಡುತ
ಹಣದ ಥೈಲಿ ತುಂಬಿಕೊಂಡರೋ,
My name is Funga
My name is Tinga
ರೇಸು, ಜೂಜು, ಮಟ್ಕಾ, ಇಸ್ಪಿಟ್
ಎಲ್ಲಾ ಮೋಜಿನ ದಂಧೆ ಮಾಡುವ
ಇಂಟರ್ ನ್ಯಾಶನಲ್ ಫೇಮಸ್ ಏಜೆಂಟ್
ನಾವೇ ಟಿಂಗ–ಫಂಗರೂ, ದೋಸ್ತರೊ
ಲಫ್ & ಬ್ಲಫ್ ಕಂಪನಿಯ ಮಾಲಿಕರು.
ನಾವೆ ನಾವೆ ಫಂಗ, ಟಿಂಗ ದೋಸ್ತರೊ
ಜಿಗ್ರಿ . . . . . ಜಿಗ್ರಿ ದೋಸ್ತಿಗಳೋ
ಜಿಗ್ರಿ . . . . . ಜಿಗ್ರಿ ದೋಸ್ತಿಗಳೋ

ಫಂಗಾ : ಹಲೋ . . . . . . . . ಹಾಯ್ ನನ್ನ ಹೆಸರು ಫಂಗಾ
ಟಿಂಗಾ : ವಾವ್ . . . . . . . . . ಹಾಯ್ ನನ್ನ ಹೆಸರು ಟಿಂಗಾ
ಇಬ್ಬರೂ : ನಾವು ಲಫ್ & ಬ್ಲಫ್ ಕಂಪನಿಯ ಮಾಲಿಕರು
ಫಂಗಾ : ಅಂದ ಹಾಗೆ ನಮ್ಮ ಬಿಸಿನೆಸ್ ಏನು? ಅಂತ ಕೇಳ್ತಿರಲ್ಲಾ?
ಟಿಂಗಾ : ಮಕ್ಕಳನ್ನು ಸಪ್ಲಾಯ್ ಮಾಡೋದು
ಫಂಗಾ : ಅಂದ್ರೆ ಮಕ್ಕಳಿಲ್ಲದವರಿಗೆ ಮಕ್ಕಳನ್ನು ಸಪ್ಲಾಯ್ ಮಾಡೋದಲ್ಲಾ
ಟಿಂಗಾ : ಕೆಲಸಕ್ಕೆ I mean ಕೂಲಿಗೆ ಅವಶ್ಯವಿರುವ ಸಂಘ ಸಂಸ್ಥೆಗಳಾಗಲಿ.......



ಫಂಗಾ : ಫ್ಯಾಮಿಲಿಗಳಾಗಲಿ.................

ಟಂಗಾ : ಹೋಟೆಲ್, ಬಾರ್ & ರೆಸ್ಟೋರೆಂಟುಗಳಾಗಲಿ.........

ಫಂಗಾ : ಬಿಲ್ಡರ್ಸ್‌ಗಳಾಗಲಿ..........

ಟಂಗಾ : ಯಾರಿಗೇ ಆಗಲಿ ಅತೀ ಕಡಿಮೆ ದರದಲ್ಲಿ ಬಾಲಕಾರ್ಮಿಕರನ್ನು ಸಪ್ಲಾಯ್ ಮಾಡೋ ಸಂಸ್ಥೆಯೇ.

ಇಬ್ಬರೂ : ನಮ್ಮ ಲಫ್ & ಬ್ಲಫ್ ಆನ್ ಲಿಮಿಟೆಡ್ ಕಂಪನಿಯ ಮೂಲ ಉದ್ದೇಶ.....

ಫಂಗಾ : ನಿಮಗೆ ಮಜಾ ಹೇಳ್ತೀನಿ ನಮ್ಮ ಸಂಸ್ಥೆ ಇಂಥಾ ಕೆಲಸಾ ಮಾಡೋದ್ರಿಂದಲೇನೇ ಬಡಜನ ನಮ್ಮನ್ನ ಹುಡುಕಿಕೊಂಡು ಬರ್ತಾರ. ಸ್ವಾಮಿ ನಮಗೆ ತುಂಬಾ ತೊಂದರೆ, ಕಿತ್ತು ತಿನ್ನೋ ಬಡತನಾ ನನ್ನ ಮಗೂಗೆ ಅಥವಾ ಮಗಳಿಗೆ ಎಲ್ಲಾರೂ ಒಂದು ಕೂಲಿ ಕೆಲಸಾ ಕೊಡಸಿ ಸಾರ್ ಅಂತ ಗೋಗರಿತಾರೆ.

ಟಂಗಾ : ನೋಡಿ ನಮ್ಮ ಹತ್ರಾ ಆರ್ಡರ್ ಲೀಸ್ಟ್ ಇದೆ. (ಓದುತ್ತಾ ಆರ್ಡರ್ ಪಟ್ಟಿ) ಬೆಳಿಗ್ಗೆ ನ್ಯೂಸ್ ಪೇಪರ್ ಹಂಚೋಕೆ. ಅಖಂಡ ಕರ್ನಾಟಕ Happy Morning ಪತ್ರಿಕೆಗೆ ನ್ಯೂಸ್ agentಗಳಿಗೆ 20 ಹುಡುಗರು.

ಫಂಗಾ : ಬೀಡಿ ಕಟ್ಟೋ ಕಾರ್ಮಿಕರಿಗಾಗಿ 35 ಮಕ್ಕಳು ವಿಶೇಷವಾಗಿ ಹೆಣ್ಣು ಮಕ್ಕಳು ಬೇಕು.

ಟಂಗಾ : ರೋಡ್ ಕೆಲಸದ ಜೆಲ್ಲಿ ಉಸುಕು ಹೊರಲು 50 ಮಕ್ಕಳು ಬೇಕು.

ಫಂಗಾ : ಬಾರ್ & ರೆಸ್ಟೋರೆಂಟ್ ಕೆಲಸಕ್ಕೆ 25 ಮಕ್ಕಳು,

ಟಂಗಾ : ಮದುವೆ ಮುಂಜಿವೆಗೆ ಸಮಾರಾಧನೆ ಊಟಾ ಬಡಿಸಲು ಮತ್ತು ಎಂಜಲು ಎಲೆ ಎತ್ತಲು ಮಕ್ಕಳು ಬೇಕು.

ಫಂಗಾ : ಅಬಾಬಾಬಾ ಏನ್ ಬೇಡಿಕೆ, ಏನ್ ಬೇಡಿಕೆ ಅಂತೇನಿ ಹಂಗ ಈ ಬೇಡಿಕೆ ಪಟ್ಟಿ ಬೆಳಿತಾನೆ ಹೋಗ್ತದೆ. ಈ ಪಟ್ಟಿ ಬೆಳೆದಷ್ಟು ಸರಿಯಾದ ಛಾನ್ಸ್ ಸಕತ್ ಕಮಿಶನ್ ಗಿಟ್ಟಸಬಹುದು. (ಕಾಲಿಂಗ್ ಬೆಲ್ ಶಬ್ದಾ).

ಟಂಗಾ : ಏ ಲಫಂಗ ಯಾರ ಬಂದ್ರ ನೋಡೋ.

(ಲಫಂಗ ಸೈಡ್ ವಿಂಗ್ಸಿನ ಹತ್ತಿರ ಹೋಗಿ)

ಫಂಗಾ : ಬನ್ನಿ ಬನ್ನಿ (ಗಂಡ–ಹೆಂಡತಿ (ಉಷಾ) ಪ್ರವೇಶ. ಶಹರದ ಉಡುಪು ಅಲಂಕಾರ ಮಾಡಿಕೊಂಡಿದ್ದಾರೆ).

ಗಂಡ : ಲಫ್ ಅಂಡ್ ಬ್ಲಫ್ ಕಂಪನಿ ಮಾಲೀಕರೂ . . . .

ಟಂಗಾ : ಹಾಂ ಹಾಂ ನಾನೆ ಟಂಗರಾವ್

ಫಂಗಾ : ನಾನು ಫಂಗಸ್ವಾಮಿ,

ಟಂಗಾ : ಹೇಳಿ ನಮ್ಮಿಂದೇನಾಗ್ಬೇಕು.

ಹೆಂಡತಿ(ಉಷಾ): ನೋಡಿ ನಾವು ಪೂನಾದಿಂದ ಟ್ರಾನ್ಸಫರ್ ಆಗಿ ಈ ಬೆಂಗಳೂರಿಗೆ ಬಂದು ಒಂದು ತಿಂಗಳಾತು. ನಾನು IT Companyಯಲ್ಲಿ ಕೆಲಸಾ ಮಾಡ್ತೇನೆ.

ಗಂಡ : ನಾನು BT ಕಂಪನಿಯಲ್ಲಿ ಕೆಲಸಾ ಮಾಡ್ತಾನೆ.



ಹೆಂಡತಿ : ಇಬ್ಬರೇ ಮಕ್ಕಳು

ಫಂಗಾ : ಆರತಿಗೆ ಒಬ್ಬ ಮಗಳು

ಟಂಗಾ : ಕೀರ್ತಿಗೆ ಒಬ್ಬ ಮಗ

ಗಂಡ : Exactly ನಮಗೆ ಒಂದು ಹೆಣ್ಣು ಒಂದು ಗಂಡು.

ಹೆಂಡತಿ : ಇಬ್ಬರೂ ಬಿಶಪ್ ಕಾಟನ್ ಸ್ಕೂಲಿಗೆ ಹೋಗ್ತಾರೆ.

ಗಂಡ : ಮನೆಯಲ್ಲಿ ಅಪ್ಪಾ ಅಮ್ಮಾ ಇದ್ದಾರೆ. ವಯಸ್ಸಾದವರು ನಾವಿಬ್ರೂ ಬೆಳಿಗ್ಗೆ ಕೆಲಸಕ್ಕೆ ಹೋದ್ರೆ ಸಾಯಂಕಾಲಾನೇ ಬರೋದು. ಅದಕ್ಕೆ ಮನೆಕೆಲಸಕ್ಕ ಒಬ್ರು ಆಳು ಬೇಕಾಗಿತ್ತು.

ಟಂಗಾ : ಅದಕ್ಕೇನಂತೆ ನಮ್ಮ ಸಂಸ್ಥೆ ಇರೋದೆ ನಿಮ್ಮಂಥವರ ಸೇವೆಗಾಗಿ ಹೇಳಿ ಆಳು ವಯಸ್ಸಿನವರು ಬೇಕೋ ಮಕ್ಕಳಿದ್ದರೆ ಪರವಾಗಿಲ್ಲವೊ.

ಹೆಂಡತಿ : ವಯಸ್ಸಾದೋರಾದ್ರೆ ನಮ್ಮ ಅತ್ತೆ–ಮಾವರ ಜೊತೆ ಹೊಂದಿಕೊಳ್ಳೋದು ಕಷ್ಟ. ಹೀಗಾಗಿ ಒಂದು 13–14 ವರ್ಷದ ಹೆಣ್ಣು ಮಗು ಇದ್ರೆ ಸಾಕು full time ಕೆಲಸಕ್ಕೆ.

ಫಂಗಾ : ಹಾಗೆ ಆಗಲಿ ನೋಡಿ ಮಗೂನ ಕೂಲಿ ಒಟ್ಟು ನಮ್ಮ ಕಮೀಶನ್ ಸೇರಿ ತಿಂಗಳಿಗೆ 450 ರೂಪಾಯಿ ಆಗುತ್ತೆ, ಮತ್ತೆ ಮಗುವಿನ ರಾತ್ರಿ ಹಗಲು ಊಟಾ ವಸತಿ ಎಲ್ಲಾ ನೀವೇ ನೋಡ್ಕೋಬೇಕು.

ಹೆಂಡತಿ : ಹಾಗೆ ಆಗಲಿ ತೊಗೋಳ್ಳಿ ಅಡ್ವಾನ್ಸ್.

ಟಿಂಗಾ : ಏ ಲಫಂಗ ಆ ರೇಸು, ಜೂಜು, ಕುಡಿತದ ಚಟಾ
ಹತ್ತಿದ ಮಾಲಿಂಗನ ಮಗಳನ್ನು ಇವರ ಮನೆಗೆ
ನಾಳೇ ಕಳಿಸಿಕೊಡು ಹ್ಯಾಗೂ ಆತನಿಗೆ ಚಟಕ್ಕೆ ಹಣ ಬೇಕು. ಇವರಿಗೆ ಆಳಬೇಕು ಅಲ್ವೇನೋ?

ಫಂಗಾ : ಸರಿಯಾದ್ದು ನಾಳೇನೆ ಆ ಮಾಲಿಂಗನ ಮಗಳು ಸರಸ್ವತಿನ ಇವರ ಮನೆಗೆ ಕಳಿಸಿಕೊಡ್ತೀನಿ.
(ಗಂಡ–ಹೆಂಡತಿಗೆ) ಯಜಮಾನ್ರೆ ನೀವೇನೂ ಚಿಂತಿ ಮಾಡಬೇಡ್ರಿ. ನಿಮ್ಮ ಕೆಲಸಾ ಆಯಿತು ಅಂತ ತಿಳಕೊಳ್ಳಿ. (ಗಂಡ ಹೆಂಡತಿ ನಿರ್ಗಮನ. ಫಂಗಾ–ಟಿಂಗಾ ಹಾಡುತ್ತಾ ನಿರ್ಗಮಿಸುತ್ತಾರೆ).
(ಹಿಂದೆ ಕಾಣಿಸಿಕೊಂಡ ಗೌಡ ಕಾರ್ಯಕರ್ತೆ ಗೊಂಬೆಯೊಂದಿಗೆ ಕಾಣಿಸಿಕೊಳ್ಳುತ್ತಾನೆ. ದೃಶ್ಯ 2ರಲ್ಲಿಯ ಹಾಡು ರಿಪೀಟ್).

ಆ ಹಾ ಹಾ ಹಾ ಹಾ . . . . ಆ ಹಾ ಹಾ ಹಾ . . . . . . . ಹಾ ಹಾ
ಆ ಹಾ ಆ ಹಾ ಹಾ ಆ ಹಾ ಹಾ
ವ್ಹಾ ವ್ಹಾ . . . . . . ವ್ಹಾ ವ್ಹಾ . . . . . ವ್ಹ ವ್ಹ ವ್ಹಾ ವ್ಹಾ . . . . . .
ದಿಮಾಕಿನಿಂದ ಡಿಂಗಾಚಿಕ ಕುಣಿಯುತ
ಲಫಂಗ ಫಟಿಂಗ ಬಂದರೋ
ಲಫಂಗ ಫಟಿಂಗ ಬಂದರೋ
ಹೊಸ ಹೊಸ ಬಿಜನೆಸ್
ಯೋಜನೆ ಹಾಕುತ, ಗೋಲಮಾಲ ಮಾಡುತ
ಹಣದ ಥೈಲಿ ತುಂಬಿಕೊಂಡರೋ,
My name is Funga
My name is Tinga
ರೇಸು, ಜೂಜು, ಮಟ್ಕಾ, ಇಸ್ಪಿಟ್
ಎಲ್ಲಾ ಮೋಜಿನ ದಂಧೆ ಮಾಡುವ
ಇಂಟರ್ ನ್ಯಾಶನಲ್ ಫೇಮಸ್ ಏಜೆಂಟ್
ನಾವೇ ಟಿಂಗ–ಫಂಗರೂ, ದೋಸ್ತರೊ
ಲಫ್ & ಬ್ಲಫ್ ಕಂಪನಿಯ ಮಾಲಿಕರು.
ನಾವೆ ನಾವೆ ಫಂಗ, ಟಿಂಗ ದೋಸ್ತರೊ
ಜಿಗ್ರಿ . . . . . ಜಿಗ್ರಿ ದೋಸ್ತಿಗಳೋ
ಜಿಗ್ರಿ . . . . . ಜಿಗ್ರಿ ದೋಸ್ತಿಗಳೋ

ಗೌಡ : ಏನ್ ತಂಗಿ ನಾವೇನೋ ಹಳ್ಳಿ ಜನಾ ನಮಗ ತಿಳುವಳಿಕೆ ಇಲ್ಲಾ. ಮಕ್ಕಳನ್ನು ಏನೋ ಬಡತನ ಎದುರಿಸಲಿಕ್ಕೆ ಕೂಲಿಗೆ ಕಳಸ್ತೀವಿ, ಮತ್ತೆ ಅದೂ ತಪ್ಪಂತ ನಮಗ ಈಗೀಗ ಗೊತ್ತನೂ ಆಗಾಕತ್ತೈತಿ. ಆದ್ರ ಕಲಿತ ಶಹರದ ಜನಾನೂ ಮಕ್ಕಳನ್ನು ಕೂಲಿಗೆ ಹಚ್ಚತಾರಂದ್ರ ನಂಬಲಿಕ್ಕೆ ಆಗೋದಿಲ್ಲಾ.

ಮಾಲತಿ : ಇದರಾಗ ನಂಬಲಾರದ್ದು ಏನೂ ಇಲ್ಲಾ. ಪಟ್ಟಣದ ಜನಕ್ಕ ಕೈಕೆಲಸ ಅಂದ್ರ ಬ್ಯಾಡ. 24 ತಾಸೂ ದುಡ್ಡ ಗಳಿಸೋದೊಂದೆ ಅವರ ಚಿಂತಿ, ಬ್ಯಾರೆ ಚಿಂತಿ ಮಾಡೋದೇ ಇಲ್ಲ. ಅವರಿಗೆ ಯಾರ ಮಕ್ಕಳು ಹಾಳಾದ್ರೇನು ತಮ್ಮ ಮಕ್ಕಳು ಓದು–ಬರಹಾ ಕಲಿತು ಇಂಜಿನಿಯರೋ ಡಾಕ್ಟರ್ರೊ ಆದ್ರ ಸಾಕು.

ಗೌಡ : ಅಲ್ಲಾ ತಂಗಿ ಕೂಲಿಗೆ ಮಕ್ಕಳನ್ನು supply ಮಾಡೊ ಸಂಸ್ಥೆನೂ ಶಹರದಾಗ ಅದಾವೇನು?

ಮಾಲತಿ : ಮತ್ತ ಬಾಲಕಾರ್ಮಿಕ ಪದ್ಧತಿ ಕೆಟ್ಟದ್ದು ಅಂತ ಜನರಿಗೆ ತಿಳೀಲಿಲ್ಲಾ ಅಂದ್ರ, ಅಂಥಾ ಮನೆಹಾಳ ಸಂಘಸಂಸ್ಥೆಗಳೂ ಹುಟ್ಟುಗೊಳ್ಳೋ ಕಾಲಾನೂ ಬರಬಹುದು ಅಂತ ನಮ್ಮ ಕಥಿಯೊಳಗ ಕಲ್ಪನಾ ಮಾಡೇವಿ.

ಗೌಡ : ಹೌದಾ! ಆ ಗಂಡಾ ಹೆಂಡತಿ ಆ ಮಗುನ್ನ ಕೂಲಿ ಆಳಾಗಿ ಪಡೆದ ಮೇಲೆ ಮುಂದೇನಾತು.

ಮಾಲತಿ : ಮುಂದೇನಾತಂದ್ರೆ.



# ದೃಶ್ಯ 3

## ಹಾಡು





ಜೂಜುಕೋರನ ಮಗಳು
ಸರಸೋತಿ ಕಣ್ಣೀರು ಸುರಿಸುತ್ತ
ಸೇರ್‍ಯಾಳ ಶಹರದ ಶ್ರೀಮಂತರ ಮನೆ ಕೆಲಸಕ್ಕೆ
ದಿನ ಹತ್ತು ಹದಿನಾಲ್ಕು ತಾಸು
ದುಡಿಬೇಕು ಆ ಮನಿಯೊಳಗ ಕತ್ತಿ ಹಾಂಗ
ಪಾತ್ರಿಯ ತಿಕ್ಕಬೇಕು
ಬಟ್ಟೆಯ ಒಗಿಬೇಕು
ತಿಕ್ಕಿ ಒರಿಸಬೇಕು
ಹತ್ತಂಕಣದ ದೊಡ್ಡ ಮನೆಯಾ
ಮಕ್ಕಳು ಕರಿತಾರ, ಅಜ್ಜನೂ ಕರೀತಾನ
ಅಜ್ಜಿ ತಿವಿತಿವಿದು ಬೈತಾಳ ಆ ಕಂದಮ್ಮನ ಆ ಕಂದಮ್ಮನ

**(ಈ ಹಾಡು ನಡೆದಾಗ ಮಕ್ಕಳ ಗೊಂಬೆ, ಅಜ್ಜಾ ಅಜ್ಜಿ ಗೊಂಬೆ ಮನೆ, ಯಜಮಾನನ ಗೊಂಬೆ–ಯಜಮಾನತಿ ಗೊಂಬೆ ಮಗುವನ್ನು ಗದರಿಸೋದು ನಡೆದಿರುತ್ತದೆ. ರಂಗದಾಚೆ ನಡೆದಿರುತ್ತದೆ. ಈ Extra ಗೊಂಬೆಗಳನ್ನು ಕಾರ್ಡ್‌ಶೀಟ್‌ನಲ್ಲೂ ಮಾಡಿಕೊಳ್ಳಬಹುದು. ಅಥವಾ ಕೇವಲ ಧ್ವನಿ ಕೊಟ್ಟರೆ ಸಾಕು).**

ಕಾರ್ಯಕರ್ತೆ : ಹೀಂಗ ಒಂದೈದಾರು ತಿಂಗಳು ಕಳೆದ ಮೇಲೆ ಆ ಶ್ರೀಮಂತ ಗಂಡಾ ಹೆಂಡತಿ ಪಾಟೀಲರ ಮನೆಗೆ ನಾನು ಅಚಾನಕ್ ಹೋದೆ. ಯಾಕಂದ್ರ ಪಾಟೀಲರ ಹೆಂಡತಿ ಉಷಾ ನನ್ನ ಹಳೆ ಗೆಳತಿ ನಾವಿಬ್ಬರೂ ಕೂಡೆ ಧಾರವಾಡದ ಕಾಲೇಜಿನಾಗ ಕಲತಿದ್ವಿ.

ಗೌಡ : ಅವರ ಮನಿಗೆ ನೀವು ಹೋದ್ರ್ಯಾ?

ಕಾರ್ಯಕರ್ತೆ : ಹೌದು . . . . ಒಂದು ದಿನಾ . . . . ನಾ ಮನಿಗೆ ಹೋದಾಗ . . . (ಪಾಟೀಲರ ಮನೆ ಎಂಬ ಫಲಕ ತೋರಿಸಬಹುದು. ಕಾಲಿಂಗ್ ಬೆಲ್ ಶಬ್ಧ ಪಾಟೀಲರ ಉಷಾ ಬರುತ್ತಾಳೆ).

ಉಷಾ : ಯಾರೂ? ಬಂದೆ ಬಂದೆ. (ಆಕೆ side wingನ ತನಕ ಹೋಗುತ್ತಾಳೆ) ಬನ್ನಿ ಒಳಕ್ಕೆ (ಖುಷಿಯಿಂದ ಕಾರ್ಯಕರ್ತೆ ಮಾಲತಿಯನ್ನು ಬರಮಾಡಿಕೊಳ್ಳುತ್ತಾಳೆ).

ಕಾರ್ಯಕರ್ತೆ :ಏ ಮಾಲತಿ what a surprise! ಎಷ್ಟು ವರ್ಷಾ ಆತು. ನಿನ್ನ ನೋಡಿ. ಬಾರೆ ಬಾ. ಕುತ್ಕೊ.
(ಸಾಧ್ಯವಾದರೆ dinning table Puppet ಮಾಡಿ ಅದರಲ್ಲಿ ಆ ಗೊಂಬೆಗಳನ್ನು ಕೂಡಿಸಬಹುದು?)
ಏ ಸರಸೂ . . . ಏ ಸರಸ್ವತಿ . . . . ಎಲ್ಲಿ ಹಾಳಾಗಿ ಹೋದೆ. . . ಒಂದು ಲೋಟಾ ಕಾಫಿ ಮಾಡ್ಕೊಂಡು ಬಾ
(ಒಳಗಿಂದ ಧ್ವನಿ ಆಯಿತಮ್ಮಾ).

ಉಷಾ : ಮತ್ತೇನೇ ಸಮಾಚಾರ. ಅಖಂಡ ಕರ್ನಾಟಕ ಪತ್ರಿಕೆಯಲ್ಲಿ ನಿನ್ನ ಲೇಖನಾನೇ ಕಾಣೋದಿಲ್ಲಾ. ಏನು ಪತ್ರಿಕೆಗೆ ರಾಜೀನಾಮೆ ಕೊಟ್ಟ ಬಿಟ್ಯಾ.

ಮಾಲತಿ : ಹೌದು ಕಣೆ.

ಉಷಾ : ಮತ್ತೆ ಈಗೇನು ಮಾಡ್ತಾ ಇದ್ದೀಯಾ?

ಮಾಲತಿ : ಸರ್ವೋದಯ ಅನ್ನೋ ಸಂಸ್ಥೆಯಲ್ಲಿ ಮಕ್ಕಳ ಹಕ್ಕು, ಶಿಕ್ಷಣ ಕುರಿತು ಜನರಲ್ಲಿ ಅರಿವು ಮೂಡಿಸೋ ಒಂದು ಯೋಜನೆಯಲ್ಲಿ ಕೆಲಸಾ ಮಾಡ್ತಾ ಇದೀನಿ.

ಉಷಾ : ಅಭ್ಭಾ. . . . ಏ. . . .ಸರಸೂ ಕಾಫಿ ಬೇಗ ತಾರೆ.

ಮಾಲತಿ : ಯಾರೇ ಈ ಸರಸೂ ಎಷ್ಟೇ ವರ್ಷಾ ಆ ಹುಡುಗಿಗೆ?

ಉಷಾ : 13 ಅಥವಾ 14 ವರ್ಷ ಇರಬೇಕು. (ಅಷ್ಟರಲ್ಲಿ ಗ್ಲಾಸು ಹಿಡಿದು ಸರಸ್ವತಿ ಬರುತ್ತಾಳೆ). ತೊಗೊ ಕಾಫಿ.

ಮಾಲತಿ : ಕ್ಷಮಿಸು ಉಷಾ. . . ಇದು ನನ್ನ ಮನಸ್ಸಿನ ವಿರುದ್ಧವಾದದ್ದು, ನನ್ನ ಹೋರಾಟ ಇರೋದ ಇಂಥಾ ಬಾಲಕಾರ್ಮಿಕ ಪದ್ಧತಿ ವಿರುದ್ಧ.

ಉಷಾ : ಆದ್ರೆ ಮಾಲತಿ ನಮ್ಮ ಮನೆ ಕೆಲಸಾ ನಾವು ಯಾರಬೇಕಾದ್ದವರ ಕಡೆ ಮಾಡಿಸಿಕೋತೀನಿ.

ನಾನೇನು ಮುಗಶೆಟ್ಟಿ ಕೆಲಸಾ ಮಾಡಿಸಿಕೊಳ್ಳೊಲ್ಲಾ, ವಾರಾ ವಾರಾ ಸಂಬಳಾ ಕೊಡ್ತೇವಿ.

ಮಾಲತಿ : ನೋಡು ಉಷಾ, ಕೆಲಸದ ಆಳು ವಯಸ್ಸಿನವರಿದ್ದರೆ, ಯುವಕರಿದ್ದರೆ ನಿನ್ನ ಮಾತು ನಿಜ. ಆದ್ರೆ ಪಾಪ ಕಲಿಯುವ ವಯಸ್ಸಿನ ಮಕ್ಕಳನ್ನು ದುಡಿಸಿಕೊಳ್ಳೋದು ಮಹಾ ಅಪರಾಧ.

ಉಷಾ : ಅಪರಾಧ !

ಮಾಲತಿ : ಹೌದು ಅಪರಾಧ, ನಮ್ಮ ಕಾನೂನಿನಲ್ಲಿ ಕೂಡಾ ಅದಕ್ಕೆ ದಂಡಾ–ಶಿಕ್ಷೆ ಇದೆ.

ಉಷಾ : ಅದು ನನಗೆ ಗೊತ್ತು ಆದರೂ. . .!

ಮಾಲತಿ : ಕಾನೂನು ಅಷ್ಟು ಬಿಗಿ ಇಲ್ಲಾ ಅಂತ ನಿನ್ನ ಅನುಕೂಲಕ್ಕೆ ಈ ಮಗೂನ್ನ ಕೆಲಸಕ್ಕೆ ಇಟಗೊಂಡೆ. ಹೌದಾ! ಕಾನೂನು ಹೋಗಲಿ ಉಷಾ ನೀನು ಕಲಿತವಳು. ನೀನೆ ಹೀಗೆ ವರ್ತಿಸಿದರೆ ಇನ್ನು ಸಾಮಾನ್ಯ ಜನರ ಹೇಗೆ ವರ್ತಿಸಬೇಡ? ನೋಡು ನಿನ್ನ ಮಕ್ಕಳಂತೆ ಆ ಮಗುವಿಗೂ ಕಲಿಯೋ ವಯಸ್ಸು, ಅವಳ ಭವಿಷ್ಯನೂ ಉಜ್ವಲ ಆಗೋದು ಬ್ಯಾಡವಾ. ಆ ಮಗುವಿನ ಭವಿಷ್ಯ ಬೀದಿ ಪಾಲ ಆಗಬೇಕಾ ಯೋಚನೆ ಮಾಡು? (ಈ ಮಾತು ನಡೆದಂತೆ ಮಕ್ಕಳು, ಗಂಡ ಬಂದಿದ್ದಾರೆ).

ಉಷಾ : I am very sorry ನಿನ್ನ ಮಾತು ನಿಜಾ. ಏನೋ ಶಹರದ ಕೆಲಸದ ಒತ್ತಡಕ್ಕೆ ಮಣಿದು ಆ ಲಫ್ & ಬ್ಲಫ್ ಕಂಪನಿಗೆ ಹೋಗಿ ಈ ಹುಡುಗೀನ್ ಕರಕೊಂಡು ಬಂದ್ವಿ. ಇವಳನ್ನ ಅವರೀಗೇ ಒಪ್ಪಿಸಿಬಿಡುತ್ತೇನೆ.

ಮಾಲತಿ : ಬೇಡಾ ಬೇಡಾ ಅವರನ್ನ ಲೇಬರ್ ಇನ್ಸ್‌ಪೆಕ್ಟರ್, ಪೋಲೀಸರು ವಿಚಾರಿಸಿಕೊಳ್ತಾರೆ. ಈ ಹುಡುಗಿ ನನ್ನ ಜೊತೆ ಬರಲಿ. ಇಂಥಾ ಹೆಣ್ಣು ಮಕ್ಕಳ ಶಿಕ್ಷಣ ಯೋಗಕ್ಷೇಮಕ್ಕಾಗಿ ಸರಕಾರ ಸಾಕಷ್ಟು ಯೋಜನೆ ಹಾಕಿಕೊಂಡಿದೆ. ಅದರ ಪ್ರಯೋಜನ ಪಡೆದು ಈಕೆಯನ್ನು ಶಾಲೆಗೆ ಸೇರಿಸೋಣ.

ಮಕ್ಕಳು : ಅಮ್ಮಾ ಸರಸಕ್ಕ ನಮ್ಮ ಶಾಲೆಗೆ ಸೇರಿಕೊಳ್ಳಲಿ.

ಉಷಾ : ಹಾಗೆ ಆಗಲಿ . . . ಈಕೆಯ ಪ್ರತಿವರ್ಷದ ಶಿಕ್ಷಣದ ಖರ್ಚನ್ನು ನಾವು ನಮ್ಮ ಖುಷಿಯಿಂದ ಮಾಡ್ತೇವೆ.

ಮಾಲತಿ : ಉಷಾ ನಿನ್ನಲ್ಲಿ ಆದ ಪರಿವರ್ತನೆ, ನಮ್ಮ ಬಾಲಕಾರ್ಮಿಕ ಪದ್ಧತಿಯನ್ನು ಪ್ರಚೋದಿಸುವ ಪ್ರತಿಯೊಬ್ಬರಲ್ಲಿಯೂ ಮೂಡಿದರೆ ನಮ್ಮ ದೇಶದ ಪ್ರತಿಯೊಬ್ಬ ಮಕ್ಕಳ ಭವಿಷ್ಯ ಉಜ್ವಲವಾಗಿರುತ್ತದೆ.

ಎಲ್ಲರೂ : ಹೌದು ಮಾಲತಿ ಅಕ್ಕ ನಿನ್ನ ಮಾತು ನಿಜ,

ಮಾಲತಿ : ಬಾಲಕಾಮಿಕ ಪದ್ಧತಿ ತೊಲಗಿದರೆ ನಮ್ಮ ದೇಶದ ಭವಿಷ್ಯ ಬೆಳಗೋದರಲ್ಲಿ ಸಂಶಯವಿಲ್ಲ.

ಎಲ್ಲರೂ : ಹೌದು! ಸಂಶಯವಿಲ್ಲ.

## ಹಾಡು

ಬೆಳಗಲಿ ಬೆಳಗಲಿ
ಈ ದೇಶದ ಪ್ರತಿ ಕಂದಮ್ಮಗಳ
ಬಾಳ ಜ್ಯೋತಿ ಬೆಳಗಲಿ
ಹೆಣ್ಣೇ ಇರಲಿ ಗಂಡೇ ಇರಲಿ
ಪ್ರತಿ ಮಗುವಿಗೆ ಶಿಕ್ಷಣ ಸಮನಾಗಿ ಸಿಗಲಿ
ನಾಳೆ ನಾವು ಸ್ವತಂತ್ರರೆಂದು
ಅವರು ಹೆಮ್ಮೆಯಿಂದ ಬೀರಲಿ
ಬಾಲಕೂಲಿ ವಿನಾಶವಾಗಲಿ
ಎಲ್ಲ ಮಕ್ಕಳ ತುಟಿಯಲಿ
ನಗುವಿನ ಕಾರಂಜಿ ಚಿಮ್ಮಲಿ
ಬೆಳಗಲಿ ಬೆಳಗಲಿ

(ಮಕ್ಕಳು, ಗಂಡ–ಹೆಂಡತಿ ಗೊಂಬೆ ಎಲ್ಲರ ನಿರ್ಗಮನ)

ಗೌಡ : ತಂಗಿ ಭಾಳ ಚಂದ ಕತಿ ಆಡಿ ತೋರಿಸಿದಿ ಮಜಾ ಏನಪಾ ಅಂದ್ರ ನಿನ್ನ ಕತಿ ಒಳಗ ನೀನ ಒಂದು ಪಾತ್ರ ಆಗಿ ಬಂದದ್ದು, ಮೋಜಿನ ಸಂಗತಿ ಬಿಡು.

**ಮಾಲತಿ :** ಇದು ನನ್ನ ಕತಿ. ಅದ್ರೊಳಗ ನಾನೂ ಒಂದು ಪಾತ್ರ ಆಗಿದ್ದಕ್ಕ ನನ್ನ ಗೆಳತಿ ಮನಸ್ಸು ಬದಲಾತು. ಅಂತ ನನಗೆ ಹೆಮ್ಮೆ ಅನಸ್ತದ. ಹಾಂಗ ನನ್ನ ಈ ಆಟದಿಂದ ನಿಮ್ಮಲ್ಲಿ ಯಾರಾದ್ರೂ ಬಾಲಕಾರ್ಮಿಕ ಪದ್ಧತಿಯನ್ನ ನಿಮಗ ತಿಳಿದೂ ತಿಳಿಯದೆಯೋ ಪ್ರಚೋದನೆ ಮಾಡತಿದ್ರ ಅವರು ಮನಸ್ಸೂ ಬದಲಾಗಲಿ, ಎಲ್ಲ ಮಕ್ಕಳೂ ಒಂದೆ, ಎಲ್ಲ ಮಕ್ಕಳಿಗೂ ಶಿಕ್ಷಣ, ಹೊಟ್ಟೆ ಬಟ್ಟೆಗೆ ಸಿಗಲಿ ಬಾಲಕಾರ್ಮಿಕ ಪದ್ಧತಿ ಎಂಬ ಅನಿಷ್ಠ ತೊಲಗಲಿ.

(ಎಲ್ಲರೂ ಬಾಲಕಾರ್ಮಿ ಪದ್ಧತಿ ತೊಲಗಿ ಮಕ್ಕಳಿಗೆ ಅವರ ಹಕ್ಕಿನ ಶಿಕ್ಷಣ ಸಿಗಲಿ ಎಂಬ ಘೋಷಣೆ ಈ ಘೋಷಣೆಯಲ್ಲಿ ಪ್ರೇಕ್ಷಕರನ್ನು ಸೇರಿಸಿಕೊಳ್ಳಬೇಕು).

## ಹಾಡು

ಬೆಳಗಲಿ ಬೆಳಗಲಿ
ಈ ದೇಶದ ಪ್ರತಿ ಕಂದಮ್ಮಗಳ
ಬಾಳ ಜ್ಯೋತಿ ಬೆಳಗಲಿ
ಹೆಣ್ಣೇ ಇರಲಿ ಗಂಡೇ ಇರಲಿ
ಪ್ರತಿ ಮಗುವಿಗೆ ಶಿಕ್ಷಣ ಸಮನಾಗಿ ಸಿಗಲಿ









# 1.4 ಪುಟ್‌ಗೌರಿಯ ಚಂದಮಾಮಾ

(Chandamama of Puttgouri: A Rod and Glove Puppet play)




| | | |
|---|---|---|
| ನಾಟಕ ರಚನೆ | : | ರಜನಿ ಗರೂಡ |
| ಗೊಂಬೆಗಳ ರಚನೆ | : | ರಜನಿ ಗರೂಡ, ಮುರಾರಿ ಕಾಸರಗೂಡು |
| ಸಂಗೀತ | : | ನಾಗರಾಜ ಹೆಗಡೆ |
| ಅವಧಿ | : | 25 ನಿಮಿಷ |

# ಪಾತ್ರ ಪರಿಚಯ



ಪುಟ್‌ಗೌರಿ – 10–12 ವಯಸ್ಸು, ಲಂಗ, ಬ್ಲೌಸು ತೊಟ್ಟಿದ್ದಾಳೆ. ಅಲ್ಲಲ್ಲಿ ಹರಿದಿದೆ.



ಮಗು – 3 ವರ್ಷ, ಶ್ರೀಮಂತಿಕೆಯ ವೇಷ



ಹೆಂಡತಿ – ಮಾಡ್ರನ್ ಆಗಿದ್ದಾಳೆ. 25–30 ವಯಸ್ಸು, ಸೀರೆ ಅಥವಾ ನೈಟಿ ತೊಡಬಹುದು.



ಗಂಡ – ಆಫೀಸರ್ 30–35 ವರ್ಷ, ನೀಟಾಗಿ ಡ್ರೆಸ್ ಮಾಡಿದ್ದಾನೆ.



ಚಂದಾಮಾಮಾ – ಒಂದು ಕಾಲ್ಪನಿಕ ಪಾತ್ರ

## ಹಿನ್ನೆಲೆ ರಂಗ ಸಜ್ಜಿಕೆಯ ಚಿತ್ರಗಳು:



1. ಹಳ್ಳಿಯ ದೃಶ್ಯ ಒಂದು ಪುಟ.



2. ಪೇಟೆಯ ದೃಶ್ಯ ಒಂದು ಪುಟ.



3. ರಾತ್ರಿಯ ದೃಶ್ಯ, ನಕ್ಷತ್ರದಿಂದ ಕೂಡಿದ ಆಕಾಶ.

## ರಂಗ ಪ್ರಯೋಗ ರಂಗ ಪ್ರಸ್ತುತಿ:

"ಎಲ್ಲ ಮಕ್ಕಳು ನಮ್ಮವರೇ" ಸಲಾಕೆ ಹಾಗೂ ಗ್ಲೌಸ್ ಗೊಂಬೆ ಆಟ ಮಾದರಿಯ ರಂಗಸಜ್ಜಿಕೆ ಹಾಗೂ ಪ್ರಸ್ತುತಿ ಬಳಸಿಕೊಳ್ಳಬಹುದು.

ಸಂಗೀತ–ಹಾಡು:

ಸಾಮಾನ್ಯವಾಗಿ ಎಲ್ಲ ಗೊಂಬೆ ಆಟದ ಮಾದರಿಯಲ್ಲೇ ಇರುತ್ತದೆ. ಕೇವಲ ಹಾಡುಗಳ ಹಿನ್ನೆಲೆ ಸಂಗೀತದ ಎಫೆಕ್ಟ್ ಸ್ವಲ್ಪ ಬೇರೆ ಮಾಡಿಕೊಳ್ಳಬಹುದು.



# ದೃಶ್ಯ 1

(ಕಪ್ಪು ಪರದೆಯ ಗೊಂಬೆಯ ಮನೆ, ಹಾಡು ಪ್ರಾರಂಭವಾಗುತ್ತಿದ್ದಂತೆ 10–12 ವಯಸ್ಸಿನ ಹುಡುಗಿಯ ಕೈಗವಸಿನ ಗೊಂಬೆಯೊಂದು ಕುಣಿಯುತ ಬರುತ್ತದೆ. ಮರಗಳು, ಗಿಡಗಳು, ಚಂದ್ರ ಮುಂತಾದ ಸೀನರಿಗಳ ಹಿನ್ನೆಲೆ ಇರುತ್ತದೆ. ಕಪ್ಪು ಪರದೆಯ ಮುಂದೆ ಚಂದಮಾಮನ ಆಕೃತಿ ಬರುತ್ತದೆ. Buildingನ ದೃಶ್ಯ ಹಿನ್ನೆಲೆಯಲ್ಲಿ ಕಾಣಿಸುತ್ತದೆ).

**ಚಂದಮಾಮಾ:** ಉಸ್ಸಪ್ಪಾ, ಈ ಸಿಟಿನಲ್ಲಿ ಮನೆ–ಅಪಾರ್ಟ್‌ಮೆಂಟ್ – ದೊಡ್ಡ ದೊಡ್ಡ ಟವರ್‌ಗಳನ್ನೆಲ್ಲ ಹತ್ತಿ ಇಳ್ದು ಸಾಕಾಗಿ ಹೋಗಿದೆ. ಒಂದ್ಸಾರಿ ಆಕಾಶದ್ ಕಡೆ ಮುಖಮಾಡಿ ಏರಿದ್ರೆ, ಇನ್ನೊಂದ್ಸಾರಿ ಪಾತಾಳದ್ ಕಡೆ ಮುಖಮಾಡಿ ಇಳೀಬೇಕು. ಹೀಗ್ ಇಳ್ದೂ ಹತ್ತಿ, ಇಳ್ದೂ ಹತ್ತಿ ಮಾಡಿ ದುಂಡಗೆ ಚಂಡಿನಂತಿದ್ದೋನು ಕಲ್ಲಂಗಡಿ ಹಣ್ಣಿನ ಹೋಳಿನಂಗೆ ಆಗೋಗಿದ್ದೀನಿ. ಇಲ್ಲಿ ಸ್ವಲ್ಪ rest ಮಾಡ್ದೆ ಇದ್ರೆ ನಾನಿನ್ನೂ ಕರಗಿ ಸಣ್ಣಾಗಿ ತೆಳ್ಳಗಿನ್ ದಾರದ್ಹಾಂಗ್ ಆಗಿ ಬಿಡ್ತೀನಿ, ಉಸ್ಸಪ್ಪಾ. ಅರೆ ಏನಿದು ಹಾಡು ಕೇಳ್ತಾ ಇದ್ಯಲ್ಲಾ . . ಹಾಡೋವರು ಯಾರು? ಅರೆ. . . ಪುಟ್ ಹುಡ್ಗಿ ಹ್ಯಾಂಗ್ ಹಾಡಿ ಕುಣಿದಾಡ್ತಾ ಇದ್ದಾಳೆ. ಏನ್ ಚೆಲುವೆ.



## ಹುಡುಗಿಯ ಹಾಡು

ನಾನು ಇನ್ನೂ ಚಿಕ್ಕೋಳಿದ್ದಾಗ
ಆಕಾಶನ ನೋಡ್ತಿದ್ದೆ
ನಕ್ಷತ್ರಗಳ ಎಣಿಸ್ತಿದ್ದೆ
ಚಂದ್ರನ್ ಮುಟ್ಟಿ ಬರ್ತಿದ್ದೆ
ಮೋಡಗಳ ಹಿಡಿತಿದ್ದೆ ॥
ನಾನು ಇನ್ನೂ ಚಿಕ್ಕೋಳಿದ್ದಾಗ
ಪುಟ್ಟ ಲಂಗ ತೊಡತಿದ್ದೆ
ಓಣಿಲೆಲ್ಲ ಓಡಾಡ್ತಿದ್ದೆ
ಮಣ್ಣು ಕಲ್ಲಲ್ ಆಡ್ತಿದ್ದೆ
ಅಮ್ಮನ್ ಜೊತೆ ಮಲಗ್ತಿದ್ದೆ ॥
ನಾನು ಇನ್ನೂ ಚಿಕ್ಕೋಳಿದ್ದಾಗ
ಕಾಡನ್ನೆಲ್ಲ ಸುತ್‌ತ್ತಿದ್ದೆ
ಗದ್ದೆ ತೋಟಾ ಅಲೀತಿದ್ದೆ
ಮಳೆಯಲ್ಲಿ ನೆನೀತಿದ್ದೆ
ಮಲ್ಲಿಗೆ ಹೂ ಮುಡಿತಿದ್ದೆ ॥
ನಾನು ಇನ್ನೂ ಚಿಕ್ಕೋಳಿದ್ದಾಗ
(ಹಾಡು ಬದಲಾಗುತ್ತದೆ. ವಿಷಾದದಿಂದ)
**ಆದ್ರೆ ಈಗ . . . .**
ಪಾತ್ರೆ ಬಟ್ಟೆ ತೊಳಿತೇನೆ
ಮನೆ ಕೆಲ್ಸ ಮಾಡ್ತೇನೆ
ಯಾರ್ದೊ ಮಗೂನ ಆಡಸ್ತೇನೆ. . . .



(ಹಿಂದಿನಿಂದ ಹೆಂಗಸೊಬ್ಬಳು ಕೂಗುತ್ತಾ ಬರುತ್ತಾಳೆ. ಮಗು ಜೋರಾಗಿ ಅಳುತ್ತಿದೆ).

**ಹೆಂಡತಿ :** ಏ. . . . . . ಪುಟ್ಟಗೌರಿ . . . . . ಎಲ್ಲಿ ಹಾಳಾಗಿ ಹೊದ್ಲೊ. . . ಎಲ್ಲಾದ್ರು ಒಂದು ಕಡೆ ನೋಡ್ತಾ ಇದ್ರೆ ಅಲ್ಲಿ ಕೂತ್ ಬಿಡ್ತಾಳೆ.
ಈಗೇನ್ ನೋಡ್ತಿದ್ದಾಳೋ ಡೊಂಬರಾಟ ನನಗೆ ಆಫೀಸಿಗೆ ಹೊತ್ತಾಯ್ತು, ಪುಟ್‌ಗೌರಿ. . . . .
ಏ. . ಇಲ್ ಬನ್ರೀ ಸ್ವಲ್ಪ . . . . . .

ಗಂಡ : ನನಗೂ ಹೊತ್ತಾಗೋಯ್ತು. ದಿನಾನಿಂದೊಂದು ಗೋಳು ಹೊತ್ತಿಗ್ ಸರಿಯಗಿ ತಿಂಡಿ ಇಲ್ಲ. . .
. . ಊಟ ಇಲ್ಲ ಇದ್ದೊಂದು ಮಗೂನ್ ನೋಡ್ಕೊಳ್ಳೋಕೂ ಆಗಲ್ಲ.

ಹೆಂಡತಿ : ಯಾಕೆ? ನಿಮ್ಹಂಗೆ ನಾನೂ ಕಲ್ತಿಲ್ವಾ? ನಾನು ನನ್ ಕರೀಯರ್ ಮಾಡ್ಕೊಳ್ಳೋದು ಬೇಡ್ವಾ?
ತಿಂಗಳ್ ಕೊನೆಯಲ್ಲಿ ಸಂಬ್ಳಾ ಎಣ್ಸೆ ತರೋವಾಗ ಸುಮ್ನಿರ್ತೀರಿ. ಮಗು ನಂದೊಬ್ಬದಾ? ನೀವ್ಹೇಗ್ ಬದಕ್ತೀರೋ. . . .
ನನಗೂ ಹಾಗೆ ಬದುಕೋದಕ್ಕೆ ಹಕ್ಕಿದೆ, ತಿಳೀತಾ?

ಗಂಡ : ಬಹಳಾ ಮಾತಾಡ್ತಿ ಬಿಡು! ಏನೊ ನಾಲ್ಕ್ ಕಾಸ್ ತರ್ತಾಳೆ ಅಂತ ಬಹಳ ಧಿಮಾಕು. ನೀನೊಬ್ಳೆ ಏನು?
ಮದುವೆ ಮಾಡ್ಕೊಂಡು ಹೊರಗೆ ಕೆಲ್ಸ ಮಾಡ್ಕೊಂಡು ಮಗನ್ನ ಹಡ್ದಿರೋಳು.

ಹೆಂಡತಿ : (ಪಾತ್ರೆ ಬಿಸಾಕುತ್ತಾ ಅಥವಾ ಪಾತ್ರೆಗಳನ್ನು ಕುಟ್ಟುತ್ತ) ಈ ಹಣೆಬರಕ್ಕೆ ಮದುವೆ ಮಾಡ್ಕೊಂಡೆ.
ಹೊರಗ ದುಡ್ತ, ಮನೆಯಲ್ಲೂ ಕಿರಿ ಕಿರಿ ಎಲ್ಲೂ ಹೋಗ ಹಾಗಿಲ್ಲ ಬರೋ ಹಾಗಿಲ್ಲ. (ಮತ್ತೆ ಪಾತ್ರೆಗಳ ಶಬ್ದ).

ಗಂಡ : ಏನು ಮಾತು ಮಾತಿಗೆ ರೇಗಾಡ್ತೀಯಲ್ಲಾ? ಮಾಡಿಸ್ತೀನಿ ಇರು. (ಹೊಡೆಯಲು ಬರುತ್ತಾನೆ.
ಮಗು ಜೋರಾಗಿ ಅಳಲು ಪ್ರಾರಂಭಿಸುತ್ತದೆ. ಗೌರಿ ಮತ್ತು ಮಗು ಮೂಲೆಯಲ್ಲಿ ಮುದುರಿಕೊಳ್ಳುತ್ತಾರೆ).

ಹೆಂಡತಿ : (ಅಳುತ್ತಾ) ಹೀಗೆ ಹೊಡ್ದ ಬಿಟ್ರೆ ಸುಮ್ನಿರ್ತೀನಿ ಅಂದ್ಕೊಂಡ್ರಾ? ನಾನು ಮಹಿಳಾ ಆಯೋಗಕ್ಕೆ ತಿಳಿಸ್ತೀನಿ.
ನನ್ ಮೈ-ಕೈ ಆದ್ರು ಮುಟ್ಟಿ.

ಗಂಡ : ಇದೊಂದು ಸುಲಭ ಆಗ್ಹೋಗಿದೆ ನಿನಗೆ. ನನಗೆ ತಿಂಡಿ ಬೇಡ. ಊಟ ಬೇಡ. ಆಫೀಸಿಗೆ ಹೊತ್ತಾಯ್ತು.
ಏನಾದ್ರೂ ಮಾಡ್ಕೊಂಡ್ ಸಾಯಿ. (ಹೋಗುತ್ತಾನೆ)

ಹೆಂಡತಿ : (ಅವನು ಹೋಗಿದ್ದನ್ನು ನೋಡುತ್ತಾಳೆ. ಗಾಡಿಯ ಶಬ್ಧ ಆಗುತ್ತದೆ. ಪುಟ್‌ಗೌರಿಯನ್ನು ನೋಡುತ್ತಾಳೆ, ಸಿಟ್ಟು ಬರುತ್ತದೆ).
ಇವ್ಳಿಂದಾನೆ ಎಲ್ಲಾ ಆಗಿದ್ದು. ನನ್ ಕೆಲ್ಸದ್ಹೊತ್ತಿಗೆ ಎಲ್ ಹೋಗಿರ್ತಾಳೇನೋ, ಮನೆ ಕೆಲಸಾ ಬರೋಲ್ಲ, ಮಗೂನ್ನ
ನೋಡ್ಕೊಳ್ಳೋಕ್ಕೂ ಬರೂಲ್ಲ, ಹಳ್ಳಿಯಿಂದ ನಿನ್ನಂಥ ಅಪದ್ಧನ್ನ ಕೆಲಸಕ್ಕ ಕರಕೊಂಡ ಬಂದ್ನೆಲ್ಲಾ ಅದು ನನ್ನ ತಪ್ಪು.
ಇವ್ಳಿಂದಾನೆ ನಾವಿಬ್ರು ಜಗಳಾಡೋದು. ಥತ್ ನಿನ್ನ! ಇಲ್ಲ್ ಬಾರೇ. . . . (ಪುಟ್‌ಗೌರಿ ಹೆದರುತ್ತಾ ಬರುತ್ತಾಳೆ.
ಹೆಂಡತಿ ಅವಳನ್ನು ಹೊಡೆಯುತ್ತಾಳೆ. ಪುಟ್‌ಗೌರಿ ಅಳಲು ಪ್ರಾರಂಭಿಸುತ್ತಾಳೆ. ಮಗೂ ಕೂಡ ಅಳುತ್ತದೆ).



ಪುಟ್‌ಗೌರಿ: (ಅಳುತ್ರ) ಇನ್ನೊಮ್ಮೆ. . . . ಹೀಂಗ್ ಮಾಡಲ್ಲಕ್ಕಾ. . . . . ಎಲ್ಲಾ ಕೆಲ್ಸ ಮಾಡ್ತೀನಿ . . . ಅಕ್ಕಾ . . . .
ಹೊಡೀಬೇಡ ಅಕ್ಕಾ . . . .

**ಹೆಂಡತಿ** : ಇನ್ ಬೇಗ್ ಕೆಲ್ಸ ಮಾಡ್ದೆ ಇದ್ರೆ ಕೈನೇ ಸುಟ್ಟ ಹಾಕ್ಬುಡ್ತೀನಿ. ನೆನಪಿಟ್ಕೊ.

**ಪುಟ್‌ಗೌರಿ** : ಹುಂ. (ಅಳುತ್ತಾ ತಲೆ ಹಾಕುತ್ತಾಳೆ ಮಗು ಹೆದರಿ ಮೂಲೆಯಲ್ಲಿ ಕುಳಿತಿದ).

**ಹೆಂಡತಿ** : ನಿನಗೆ ಅಲ್ಲಿ ಅನ್ನ ಸಾರು ಇದೆ ತಿನ್ನು. ಕುಕ್ಕರ್‌ನಲ್ಲಿ ಅನ್ನ ಇದೆ. ಮೊಸರು ಹಾಕಿ ಮಗೂಗೆ ಉಣ್ಸು. ಹಾಲ್ ಕುಡ್ಸು. ಹಣ್ ತಿನ್ಸು, ನಾನು ಬರೋದ್ರಲ್ಲಿ ಪಾತ್ರೆ, ಬಟ್ಟೆ ತೊಳ್ದು,ನೆಲಾ ಒರ್‍ಸಿ ಎಲ್ಲಾ ಕ್ಲೀನ್ ಮಾಡಿರಬೇಕು ತಿಳೀತಾ?

**ಪುಟ್‌ಗೌರಿ** : (ತಲೆ ಹಾಕುತ್ತಿದ್ದಾಳೆ. ಹೆಂಡತಿ ಹೋಗುತ್ತಾಳೆ. ಮಗುವನ್ನು ಪುಟ್‌ಗೌರಿ ಎತ್ಕೊಂಡಿರ್‍ತಾಳೆ. ಮಗುವನ್ನು ಆಡಿಸುತ್ತಾ ಹಾಡುತ್ತಾಳೆ).

## ಹಾಡು

ಜೋ ಜೋ ಜೋ ಜೋ ಲಾಲಿ ॥
ಪುಟ್ಟ ಕಾಲಿಗೆ ಮುತ್ತಿನ ಗೆಜ್ಜೆ ।
ಮುದ್ದು ಮುಖಕ್ಕೆ ಬಣ್ಣದ ಟೋಪಿ । ಶ್ರೀಗಂಧದ ಮೈಗೆ ರತ್ನದ
ಅಂಗಿ । ನವುರಾಗಿ ನೀವೀರಿ ಕೈ ಕಾಲು ॥
ಜೋ ಜೋ ಲಾಲಿ ಜೋ ಜೋ ಲಾಲಿ ॥
ಎದ್ದಾಗ ನೀಡೀರಿ ಹಾಲುಬೆಲ್ಲ ।
ಕೈಯಲ್ಲಿ ಇಡಿರಿ ಸಕ್ರೆ ಬೆಲ್ಲ ।
ಹೊಳೆಯುವುದು ನೋಡಿರಿ ಹಾಲುಗಲ್ಲ ।
ಇಡುವುದು ಹೆಜ್ಜೆ ಬಲು ಮೆಲ್ಲ ।
ಜೋ ಜೋ ಲಾಲೀ ಜೋ ಲಾಲೀ ।
(ಮುದ್ದು ಮಗುವನ್ನು ನೋಡಿ_
ಏಲಾ ಕಳ್ಳಿ . . . . ನಿದ್ದೇನೇ ಮಾಡಿಲ್ವಾ?

**ಮಗು** : ನಾನು. . . . ನಾನು . . . . ಹೀಗೆ ಮಲಗಿರ್‍ತೀನಿ. ನೀನು ಹಾಡು ಹೇಳು. ಕೇಳ್ತಿರ್‍ತೀನಿ.

**ಪುಟ್‌ಗೌರಿ**: ನಾನ್ಹೀಗೆ ಹಾಡ್ತಾ ಇದ್ರೆ. . . . ಮನೆಕೆಲ್ಸ ಮಾಡೋರ್‍ಯಾರು? ನೀನ್ ಮಾಡ್ತೀಯಾ?

**ಮಗು** : ಮನೆ ಕೆಲ್ಸ ಮಾಡ್ಬೇಡಾ.

**ಪುಟ್‌ಗೌರಿ**: ಮಾಡ್ಲಿಲ್ಲ ಅಂದ್ರೆ ಮತ್ತೆ ಹೊಡ್ತಾ ಬೀಳುತ್ತೆ.

**ಮಗು** : ಯಾರ್ ಹೊಡೀತಾರೆ?

**ಪುಟ್‌ಗೌರಿ**: ನಿಮ್ಮಮ್ಮ ಮನೆ ಕೆಲ್ಸಕ್ಕೆ ಅಂತ ನನ್ನನ್ನ ಹಳ್ಳಿಯಿಂದ ಕರಕೊಂಡು ಬಂದು ಇಟ್ಕೊಂಡಿರೋದಲ್ವಾ?

**ಮಗು** : ನನಗೆ ಮತ್ತೆ ಮನೆ ಕೆಲ್ಸನಾ ಅಮ್ಮ ಹೇಳಲ್ವಲ್ಲಾ?

**ಪುಟ್‌ಗೌರಿ**: ನನಗೆ ತಿಂಗ್ಳಿಗೆ 50 ರೂಪಾಯಿ ಸಂಬಳ ಕೊಡ್ತಾರೆ. ಜೊತೆಗೆ ಊಟಾನು ಕೊಡ್ತಾರೆ. ನೀನು ಅವರ ಮಗಳಲ್ವಾ?

**ಮಗು** : ಹಾಗಾದ್ರೆ ನಿಮ್ಮಮ್ಮ ಎಲ್ಲಿದ್ದಾರೆ?

**ಪುಟ್‌ಗೌರಿ**: ನನ್ ಊರಲ್ಲಿದ್ದಾರೆ. ನಿನ್ನ ಅಜ್ಜಿ ಊರಹತ್ರ.

**ಮಗು** : ನೀನ್ಹೇಗೆ ನಮ್ಮನೆಗ್ ಬಂದೆ?

**ಪುಟ್‌ಗೌರಿ**: ನಿನ್ನಮ್ಮ ನನ್ನನ್ನ ಇಲ್ಲಿಗೆ ಕರ್‍ಕೊಂಡು ಬಂದ್ರು

**ಮಗು** : ನೀನು ನಿನ್ನಮ್ಮನ ಬಿಟ್ಟ ಬಂದ್ಯಾ?

**ಪುಟ್‌ಗೌರಿ**: ಹುಂ. . . ನನಗೂ ಅಮ್ಮ ಇದ್ದಾರೆ. ತಂಗಿ–ತಮ್ಮ ಇದ್ದಾರೆ. ಹುಲ್ಲಿನ ಮನೆ ಇದೆ. ನಮ್ಮ ಮನೇಲಿ ಕುರಿ, ಕೋಳಿ ಇವೆ.

**ಮಗು** : ನನ್ನೂ ಕರ್‍ಕೊಂಡ್ ಹೋಗ್ತೀಯಾ? ನಿಮ್ಮನೆಗೆ?

**ಪುಟ್‌ಗೌರಿ**: ನಿಮ್ಮಮ್ಮ ಕಳ್ಸಲ್ಲಾ?

**ಮಗು** : ಯಾಕ್ ಕಳ್ಸಲ್ಲಾ?

**ಪುಟ್‌ಗೌರಿ**: ನಾವು ಬಡವ್ರು, ಗುಡಸ್ಲಲ್ಲಿ ಇರ್ತೀವಿ.

ಮಗು : ನೀನು ಊರಿಗ್ಹೋಗೋವಾಗ ನಾನು ಬರ್ತೀನಿ. ನನ್ ಕರ್‍ಕೊಂಡ್ ಹೋಗ್ಲೇ ಬೇಕು ನೀನು.

ಪುಟ್‌ಗೌರಿ: ಈಗ ನೀನು ಹಾಲ್ಕುಡಿ. ನಾನು ಮನೆ ಕೆಲ್ಸ ಮಾಡ್ಬೇಕು.

ಮಗು : ಮತ್ತೆ ಮರೀಬೇಡ. ನೀನು ಊರಿಗ್ಹೋಗೋವಾಗ ನನ್ನ ಕರ್‍ಕೊಂಡ್ ಹೋಗು ಮತ್ತೆ.

ಜೋ ಜೋ ಜೋ ಜೋ ಲಾಲಿ ॥

ಪುಟ್ಟ ಕಾಲಿಗೆ ಮುತ್ತಿನ ಗೆಜ್ಜೆ ।

ಮುದ್ದು ಮುಖಕ್ಕೆ ಬಣ್ಣದ ಟೋಪಿ ।

ಶ್ರೀಗಂಧದ ಮೈಗೆ ರತ್ನದ

ಚಂದಮಾಮ: ಎಲ್ಲಿ ನೋಡಿದ್ರೂ ಇದೇ ಹಾಡು ಕಲಿಯೋ ಮಕ್ಕಳನ್ನು ತಂದು ದುಡ್ಸೋದು, ಅವರಿಗೆ ಹೊಟ್ಟೆ–ಬಟ್ಟೆಗೆ ನೀಡದೆ ಹಿಂಸೆ ಕೊಡೋದು. ದಿನವಿಡೀ ನಾನೆಷ್ಟು ಮಕ್ಕಳ್ನ ನೋಡ್ತಾ ಇದ್ದೇನೆ! ಹೀಗಾದ್ರೆ ಆ ಮಕ್ಕಳ ಬೆಳವಣಿಗೆ, ಆರೋಗ್ಯ ಶಿಕ್ಷಣ, ಜೀವನ ನಿರ್ವಹಣೆ ಹೇಗಪ್ಪ? ನಮ್ಮ ಮಕ್ಕಳ ಮುಂದಿನ ಭವಿಷ್ಯ ಏನು? ಒಂದು ಆರೋಗ್ಯವಂತ ಸಮಾಜ ನಿರ್ಮಾಣವಾಗೋದು ಹೇಗೆ? ಈ ಮಕ್ಕಳನ್ನೆಲ್ಲಾ ಭೇಟಿಯಾಗಬೇಕು. ಅವರ ಜೊತೆ ಮಾತಾಡಬೇಕು. ಅಯ್ಯೋ ಪಾಪ! ಹುಡುಗಿ ದಣಿದಿದ್ದಾಳೆ. ಕನಸು ಕಾಣ್ತಾ ಇದ್ದಾಳೆ. ನಾನು ಆಕೆ ಕನಸಿನಲ್ಲಿ ಪ್ರವೇಶ ಮಾಡ್ತೇನೆ.



## ದೃಶ್ಯ 2

(ರಾತ್ರಿ ಮಟ್‌ಗೌರಿ ಚಂದ್ರ-ಆಕಾಶ ನೋಡುತ್ತಿದ್ದಾಳೆ. ಮಗು ಮಲಗಿದೆ).

### ಹಾಡು

ಚಂದಮಾಮಾ ಇತ್ತ ಬಾ।
ಚಂದದಿಂದ ಆಡು ಬಾ ।
ದಿನವ್ರೂ ದಿನವ್ರೂ ಬೆಳಿತೀಯಾ ।
ದಿನವು ದಿನವು ಕೂಗ್ತೀಯಾ ।
ತಿರುಗಿ ಊರಿಗ್ಹೋಗ್ಲೇಬೇಕು ।
ಅಮ್ಮನ ಜೊತೆ ಮತಾಡ್
ಬೇಕು
ತಂಗಿ ತಮ್ಮನ್ನ ಜೊತೆ ಆಡ್ಬೇಕು
ಬೆಟ್ಟಾ ಗುಡ್ಡಾ ಸುತ್ಬೇಕು ॥
ನಾಳೆ ನೀನು ಬರ್ತೀಯಾ ।
ಊರಿಗೆ ನನ್ನ ಬಿಡ್ತೀಯಾ ।
ಬಾಗಿಲಲ್ಲೆ ನಿಂತಿರ್ತ್ಲಾ ।
ಮರೆಯದಂತೆ ಬರ್ತೀಯಾ ॥



(ಹಾಡು ಮುಗಿಯುತ್ತಿದ್ದಂತೆ ಗಂಡ ಬರುತ್ತಾನೆ).



ಗಂಡ : ಏ . . . ಏನ್ಮಾಡ್ತಾ ಇದ್ದೀಯಾ? ಮಗು ಏನ್ಮಾಡ್ತಾ ಇದೆ.

ಪುಟ್‌ಗೌರಿ: ಮಲಗಿದೆ.

ಗಂಡ : ಬಾ ಇಲ್ಲಿ . . . ಸ್ವಲ್ಪ.

ಪುಟ್‌ಗೌರಿ: (ಹೆದರುತ್ತಾಳೆ) ಬಂದೆ ಅಣ್ಣಾ! ಕಾಫಿ ಮಾಡಿ ತರ್ಲಾ?(ಅವಳನ್ನು ಒಳಗೆ ಎಳೆದುಕೊಂಡು ಹೋಗುತ್ತಾನೆ. ಪುಟ್‌ಗೌರಿ ಚೀರುತ್ತಾಳೆ. ಬೇಡ ಬಿಟ್ಟು ಬಿಡಿ . . . ಎಂದು ಕೂಗಿಕೊಳ್ಳುತ್ತಾಳೆ. ಮಗು ಎಚ್ಚರವಾಗಿ ಪುಟ್‌ಗೌರಿಯನ್ನು ಕರೆಯುತ್ತಿರುತ್ತದೆ. ಪುಟ್‌ಗೌರಿ ತಪ್ಪಿಸಿಕೊಂಡು ಬರುತ್ತಾಳೆ. ಅವಳು ಬಹಳ ಸುಸ್ತಾಗಿದ್ದಾಳೆ. ಬಟ್ಟೆ–ಕೂದಲು, ಅಸ್ತವ್ಯಸ್ತವಾಗಿವೆ. ಅಳುತ್ತಿದ್ದಾಳೆ).

ಗಂಡ : ಏ . . . ನೋಡು ಇವೊತ್ತು ತಪ್ಪಿಸಿಕೊಂಡೆ! ಮಗು ಎಚ್ಚರಾತು ಅದಕ್ಕೆ ನೀನು ಬಚಾವಾದೆ. ಏನಾಯ್ತು ಅಂತ ಯಾರ್ಗುಂದು ಹೇಳಬಾರ್ದು. ತಿಳೀತಾ . . . . . ಹೇಳಿದ್ರೆ ಸಾಯಿಸ್ಬಿಡ್ತೀನಿ.

ಪುಟ್‌ಗೌರಿ: ಹೂಂ . . . . ಹೇಳಲ್ಲ . . . . ನನಗೇನು ಮಾಡ್ಬೇಡಿ.

ಗಂಡ : ಮಗೂಗೆ ಊಟ ಹಾಕು. ಇಬ್ರು ಮಲಗಿರ್ರಿ. ನಾನು ಹೊರಗ್ಹೋಗಿ ಬರ್ತೀನಿ.
(ಮಗು ಹೆದರಿ ಪುಟ್‌ಗೌರಿಗೆ ಅಂಟಿಕೊಂಡಿದೆ. ಪುಟ್‌ಗೌರಿ ಅಳುತ್ತಿದ್ದಾಳೆ).

ಮಗು : ಅಪ್ಪಾ ನಿನಗೆ ಏನ್ ಮಾಡಿದ್ರು? ನೀನು ಯಾಕ್ ಅಳ್ತಾ ಇದ್ದೀಯಾ?

ಪುಟ್‌ಗೌರಿ: ನಾನು ಊರಿಗ್ಹೋಗ್ತೀನಿ. ನಂಗಿಲ್ಲಿ ಭಯ ಆಗ್ತಾ ಇದೆ.

ಮಗು : ಹಾಗಾದ್ರೆ ನಾನು ನಿಂಜೊತೆ ಬರ್ತೀನಿ. ನೀನು ಅಳ್ಬೇಡಾ. ಅಮ್ಮನ್ನತ್ರ ಹೇಳೋಣ.

ಪುಟ್‌ಗೌರಿ: ಅಮ್ಮಂಗೆ ಹೇಳ್ಬೇಡಾ . . . ಅವ್ರಿಗ್ಹೇಳಿದ್ರೆ ನಂಗಿನ್ನು ತೊಂದ್ರೆ ಆಗುತ್ತದೆ. ಬಾ ನೀನು ಊಟ ಮಾಡು.

ಮಗು : ನಂಗೆ ಊಟ ಬೇಡ. ನೀನು . . . ನಂಜೊತೆ ಊಟ ಮಾಡು.

ಪುಟ್‌ಗೌರಿ: ನಂಗೇ . . . ಊಟ. . . . ಬೇಡ. . . . ನಂಗೇನು ಸೇರ್ತಾ ಇಲ್ಲ. ನಂಗೆ. . ಮೈ ಕೈ ಎಲ್ಲಾ . . . . ನೋವಾಗಿದೆ. ನನಗೆ ಕೂತ್ಕೋಳ್ಳೋಕು ಆಗ್ತಾ ಇಲ್ಲ. ನಾನು ಬೇಗ ಮಲಗ್ತೀನಿ.

ಮಗು : ನನಗೆ ಆ ಹಾಡು ಹೇಳು, ನೀನು ಚೆಂದ ಹಾಡು ಹೇಳ್ತಿ, ನೀ ಹಾಡು ಹೇಳಿದ್ರೆ ನಾನು ಮಲಗ್ತೀನಿ.
(ಚಂದಮಾಮಾ ಬರ್ತಾನೆ)

ಜೋ ಜೋ ಜೋ ಜೋ ಲಾಲಿ ॥
ಪುಟ್ಟ ಕಾಲಿಗೆ ಮುತ್ತಿನ ಗೆಜ್ಜೆ ।
ಮುದ್ದು ಮುಖಕ್ಕೆ ಬಣ್ಣದ ಟೋಪಿ ।
ಶ್ರೀಗಂಧದ ಮೈಗೆ ರತ್ನದ

**ಚಂದಮಾಮಾ:** ನೋಡಿದ್ರಾ!? ನಮ್ಮ ವಿದ್ಯಾವಂತ ಜನ ಅವಿದ್ಯಾವಂತರನ್ನ ಹೇಗ್ ನಡೆಸ್ಕೋತಾರೆ ಅಂತ. ಮಕ್ಕಳ ಜೊತೆ ಹೀಗೆಲ್ಲಾ ಮಾಡಿದ್ರೆ ಸುಮ್ನೆ ಬಿಟ್ ಬಿಡ್ತಾರಾ? ಪುಟ್ ಗೌರಿಗಾದ ಅನ್ಯಾಯಕ್ಕೆ ಅವಳ ಯಜಮಾನನ್ಗೆ ಏನ್ ಶಿಕ್ಷೆ ಆಗುತ್ತೆ. ಮುಂದೆ ಏನಾಗುತ್ತೆ ನೋಡೋಣ.





16565

## ದೃಶ್ಯ 3

(ಪುಟ್‌ಗೌರಿ ಹುಶಾರಿಲ್ಲದೆ ಮಲಗಿದ್ದಾಳೆ. ಮಗು ಅವಳ ಬಳಿ ಕೂತಿದೆ. ಹೆಂಡತಿ ಜೋರಾಗಿ ಕಿರುಚಿ ಕಿರುಚಿ ಬೈತಿದ್ದಾಳೆ).



**ಹೆಂಡತಿ** : ಏನಾಯ್ತು ನಿಂಗೆ? ನಾಲ್ಕ್ ದಿನದಿಂದ ಮಲಗೆ ಇದ್ದೀಯಲ್ಲಾ?
ಎಲ್ಲಾ ಕೆಲ್ಸ ನಾನೇ ಮಾಡ್ಬೇಕು. ಜೊತೆಗೆ ನಿನ್ನೂ ನೋಡ್ಕೋಬೇಕು. ಹೀಗೆ ಮಲಗೇ ಇರೋದಾದ್ರೆ ಊರಿಗ್ಹೋಗು.
ನಿನ್ನೆ ಮಾತ್ರೆ ತಂದ್ಕೊಟ್ಟಿದ್ನೆಲ್ಲಾ ತಗೊಂಡ್ಯಾ?

**ಪುಟ್‌ಗೌರಿ** : (ನರಳೂತ್ತಾ) ಹೂಂ . . . . ತಗೊಂಡೆ ನಂಗೆ . . . ಊಟ ಸೇರ್ತಾ ಇಲ್ಲ. ಎದ್ದು ಓಡಾಡೋಕೂ ಆಗೋಲ್ಲ (ಅಳುತ್ತಾಳೆ).

**ಮಗು** : ಅಮ್ಮಾ, ನಂಗೇ ಗೌರಿ ಬೇಕು. ಅವ್ಳ ಇಲ್ಲೇ ಇರ್ಲಿ.

**ಹೆಂಡತಿ** : ಇದೊಂದು! ಇವ್ಳ ಹೀಗೆ ಮಲಗಿದ್ರೆ ನಿನ್ ಯಾರು ನೋಡ್ಕೋತಾರೆ? ನಿಂಗೆ ಊಟಾ ಮಾಡ್ಸೋರ್‍ಯಾರು? ಮಲಗಸೋರ್‍ಯಾರು?

**ಮಗು** : ಗೌರಿ ನಂಜೊತೆ ಇರ್ಬೇಕು. (ಅಳುತ್ತ) ಗೌರಿ ಬೇಕು. . . .

**ಹೆಂಡತಿ** : ಏಯ್ . . . ಬಾಯ್ಮುಚ್ಚು! ನಿಂಗೇನ್ ತಿಳಿಯುತ್ತೆ ! ನೀ ಸುಮ್ನೆ ಮಲ್ಕೋ ಹೋಗು. (ಮಗು–
ಹೆಂಡತಿ ಒಳಗೆ ಹೋಗುತ್ತಾರೆ. ಪುಟ್‌ಗೌರಿ ಮಲಗಿದ್ದಾಳೆ. ರಾತ್ರಿಯಾಗಿದೆ. ಪುಟ್‌ಗೌರಿ ಹೆದರುತ್ತಾಳೆ,ಬೆಚ್ಚಿಬೀಳುತ್ತಾಳೆ,
ಕಿರುಚಿಕೊಳ್ಳುತ್ತಾಳೆ).

**ಹೆಂಡತಿ** : ಏ ಪುಟ್‌ಗೌರಿ . . . . ಏ . . . . ಏನಾಯ್ತೇ. . . . ಹಗ್ಲು ಒಂದ್ ರೀತಿ ಆದ್ರೆ, ರಾತ್ರಿ ಒಂದ್ ರೀತಿ ಇವ್ಳದ್ದು.
. . . . ಎದ್ದೇಳೆ.

**ಪುಟ್‌ಗೌರಿ**: (ಎಚ್ಚೆತ್ತು) ನಂಗೆ . . . ಹೆದ್ರಿಕೆ ಆಗ್ತಿದೆ. ಆಂ. . . (ನರಳುತ್ತಾಳೆ).

**ಹೆಂಡತಿ** : ದೇವ್ರ ಹೆಸ್ರ ಹೇಳ್ತಾ ಮಲ್ಕೊ. ನಿದ್ದೆ ಬರುತ್ತೆ. ಇನ್ ಕಿರುಚಿದ್ರೆ ಹೊರಗ್ ಮಲಗ್ಸತೀನಿ.

**ಪುಟ್‌ಗೌರಿ**: (ಮತ್ತೆ ನರಳುತ್ತಾ ಮಲಗಿದ್ದಾಳೆ).

**ಚಂದಮಾಮ**: ಇವಳು ದೊಡ್ಡ ಕಂಪನಿಯಲ್ಲಿ ಕೆಲಸ ಮಾಡೋಳು ಐದಂಕಿ ಸಂಬಳ ತರೋಳು! ಎದೆಯೊಳಗೆ
ಹೃದಯ ಅನ್ನೋದು ಇಲ್ಲ. ಇವಳಿಗೂ ಕಾನೂನು ಪ್ರಕಾರ ಶಿಕ್ಷೆ ಆಗಲೇಬೇಕು.
ಜೋ ಜೋ ಜೋ ಜೋ ಲಾಲಿ ॥
ಪುಟ್ಟ ಕಾಲಿಗೆ ಮುತ್ತಿನ ಗೆಜ್ಜೆ ।
ಮುದ್ದು ಮುಖಕ್ಕೆ ಬಣ್ಣದ ಟೋಪಿ । ಶ್ರೀಗಂಧದ ಮೈಗೆ ರತ್ನದ

# ದೃಶ್ಯ 4

(ಪುಟ್‌ಗೌರಿ ಮಲಗಿದ್ದಂತೆ ಚಂದ್ರ ಬರುತ್ತಾನೆ. ಲಕ ಲಕ ಹೊಳೆಯುತ್ತಿದ್ದಾನೆ. ಪುಟ್‌ಗೌರಿಯ ಕೈ ಹಿಡಿದು ಏಳಿಸುತ್ತಾನೆ).




**ಚಂದಮಾಮ:** ಪುಟ್‌ಗೌರಿ. . . ಪುಟ್‌ಗೌರಿ. . .
ನಾನು. . . ಯಾರ್ ಬಂದದ್ದು ನೋಡು!

**ಪುಟ್‌ಗೌರಿ :** ಓ. . . . ಚಂದಮಾಮಾ . . !

**ಚಂದಮಾಮ:** ಬಾ. . . ಹೋಗೋಣ. . . ನಡಿ.

**ಪುಟ್‌ಗೌರಿ :** ಓ . . . . ಹೋಗೋಣ. ತಡ ಯಾಕೆ ನಡಿ. . .

**ಚಂದಮಾಮ:** ನೋಡು. . . ನಿನಗಾಗಿ ರೋಹಿಣಿ, ಸ್ವಾತಿ, ಅನುರಾಧಾ, ಕೃತಿಕಾ ಎಲ್ಲಾ ತಾರೆಗಳು ಮಿನುಗ್ತಾ ಇದ್ದಾರೆ.
ಮೋಡಗಳೆಲ್ಲ ಗುಡ್ಡದ ಮೂಲೆಗೆ ಸೇರ್ಕೊಂಡಿವೆ. ನಾನು ಹೇಗೆ ಬೆಳಗ್ತಾ ಇದ್ದೇನೆ ನೋಡು.

**ಪುಟ್‌ಗೌರಿ:** ಹೌದು ಚಂದಮಾಮಾ, ಆದ್ರೆ ನೀನು ನಾನ್ ಕರ್ದಕೂಡ್ಲೆ ಯಾಕ್ ಬರ್‍ಲಿಲ್ಲ?

**ಚಂದಮಾಮ:** ನನಗೆ ತುಂಬಾ ಕೆಲ್ಸ ಇತ್ತು. ನಿನ್ಹಂಗೆ ನನ್ನನ್ನು ತುಂಬಾ ಮಕ್ಕಳು ಕರೀತಾನೆ ಇರ್ತಾರೆ. ಆಗೆಲ್ಲ ನಾನು ಹೋಗಬೇಕಲ್ಲ?

**ಪುಟ್‌ಗೌರಿ :** ಹೌದಾ! ಯಾರ್‍ಯಾರು ಕರಿತಾರೆ.

**ಚಂದಮಾಮ:** ಅಪ್ಪ-ಅಮ್ಮನ್ನ ಜೊತೆಯಲ್ಲಿ ಇಲ್ದೋರು, ತಮ್ಮ ಊರಿನಿಂದ ದೂರ ಹೋದೋರು. ಹಗಲು ರಾತ್ರಿ ಕಷ್ಟ ಪಟ್ಟು
ದುಡಿಯೋರು. ಪ್ರೀತಿ ಮಮತೆಯನ್ನು ಕಾಣ್ದೋರು. ಯಾರೂ ಇಲ್ದೋರು ಹೀಗೆ ಬಹಳ ಬಹಳಾ ಮಕ್ಕಳು ನನ್ನ ಕರೀತಾರೆ.

**ಪುಟ್‌ಗೌರಿ :** ಅವರೆಲ್ಲ ಯಾಕೆ ಕರೀತಾರೆ ನಿನ್ನ?

**ಚಂದಮಾಮ:** (ಹಾಡುತ್ತಾ, ಕುಣಿಯುತ್ತ) ನೋಡು, ನಾನೇನು ಮಾಡ್ತೀನಿ ಗೊತ್ತಿದ್ಯಾ

ಬತ್ತಿದ್ ಕೆನ್ನೆಗೆ ತಂಗಾಳೀನ ಸವರ್ತೀನಿ ।
ಗುಳಿ ಬಿದ್ದ ಕಣ್ಣಿಗೆ ಕನಸನ್ನ ತುಂಬ್ತೀನಿ ।
ಜಿಡ್ಡುಗಟ್ಟಿದ ಕೂದ್ಲಿಗೆ ಸುಗಂಧ ಹಚ್ತೀನಿ ।
ಒರಟಾದ ಮೈ ಕೈಯನ್ನೆಲ್ಲ ಮೆತ್ತ ಮೆತ್ತಗೆ ಒತ್ತತ್ತೀನಿ ॥
ಗುಡ್ಡ-ಬೆಟ್ಟ-ಕಾಡು-ಮೇಡು-ತಿರುಗ್ಸತೀನಿ ।
ತಾರೆ ಮೋಡ ಗಾಳಿ ಮಳೆನ್ನೆಲ್ಲ ಕೈಯ್ಯಲ್ಲಾಡ್‌ಸ್ತೀನಿ ।
ಅಪ್ಪ ಅಮ್ಮ ಅಕ್ಕ ಅಣ್ಣ ನಗೊಹಂಗೆ ಮಾಡ್ತೀನಿ ।
ಓದು ಬರಹದ ಗುಟ್ಟನ್ನೆಲ್ಲ ತಲೆಯಲ್ಲಿ ತುಂಬ್‌ತೀನಿ ॥

ಪುಟ್‌ಗೌರಿ : ಹೌದಾ!

ಚಂದಮಾಮಾ:ನಿನ್ನಂಗೆ ಎಷ್ಟೆಲ್ಲಾ ಮಕ್ಳು ಈ ಭೂಮಿ ಮೇಲೆ ನರಳ್ತಾ ಇದ್ದಾರೆ ಗೊತ್ತಿದ್ಯಾ?

ಪುಟ್‌ಗೌರಿ : ಯಾಕೆ? ಹೀಗೆಲ್ಲಾ ನಮಗೆ ಆಗ್ತಾ ಇದೆ?

ಚಂದಮಾಮ: ಅದ್ಕೆ ತುಂಬಾ ಕಾರಣ ಇದೆ. ನಮ್ಮಲ್ಲಿ ಜನರೂ ಜಾಸ್ತಿ. ವಿದ್ಯೆ ಕಲ್ತಿಲ್ಲ. ಬಡವ್ರು- ಶ್ರೀಮಂತರು ಅಂತರಾ ಜಾಸ್ತಿ. ಇನ್ನೂ ಬಹಳ ಕಾರಣ ಇದೆ. ಮಕ್ಕಳಿಗೆ ಏನೆ ಅನ್ಯಾಯ ಆದ್ರೂ ಅವರ ರಕ್ಷಣೆಗೆ ಕಾನೂನು ಇದೆ.

ಪುಟ್‌ಗೌರಿ : ನನಗಾಗಿದ್ದು ಯಾರಿಗ್ ತಿಳಿಯುತ್ತೆ? ಯಾರ ಹತ್ರ ಹೇಳ್ಲಿ ನಾನು!? ನನ್ಹಂಗೆ ಉಳಿದ ಮಕ್ಕಳಿಗೂ ಆಗೋದು ಬೇಡ.

ಚಂದಮಾಮ: ಹಾಗಂದ್ರೆ ತುಂಬಾ ಕೆಲ್ಸ ಆಗ್ಬೇಕು. ನಿನ್ನ ಅಕ್ಕ ಮತ್ತು ಯಜಮಾನ ಇಬ್ಬರಿಗೂ ಜೈಲ್ ಶಿಕ್ಷೆ ಆಗ್ಬೇಕು. ಮಕ್ಕಳನ್ನು ಯಾರು ದೈಹಿಕವಾಗಿ ಮತ್ತು ಮಾನಸಿಕವಾಗಿ ಹಿಂಸಿಸುತ್ತಾರೋ ಅವರ್‍ಗೆಲ್ಲಾ ಕಾನೂನು ಉತ್ತರ ನೀಡುತ್ತೆ. ಇದೆಲ್ಲಾ ಜನರಿಗೆ ತಿಳೀಬೇಕು. ನಮ್ಮ ಜನ್ರಿಗೆ ಬುದ್ಧಿ ಬರ್‍ಬೇಕು. ಬದಲಾವಣೆ ಗಾಳಿ ಬೀಸ್ಬೇಕು! ತಂದೆ-ತಾಯಿ ಮಕ್ಕಳನ್ನ ಶಾಲೆಗೆ ಕಳಿಸಬೇಕು. ಮಕ್ಕಳ ಹಕ್ಕುಗಳು ಅವಕ್ಕೆ ಸಿಗಬೇಕು. ಇದು ತಂದೆ ತಾಯಿದಷ್ಟೇ ಕೆಲ್ಸ ಅಲ್ಲ. ಇಡೀ ಸಮಾಜದ ಜವಾಬ್ದಾರಿ.

ಪುಟ್‌ಗೌರಿ : ಆದ್ರೆ . . . .ಮಾಮಾ. . . . ನಾವು ದುಡಿದೇ ಇದ್ರೆ ಮನೆ ನಡೆಯೋದ್ ಹೇಗೆ? ನಮ್ಗೆಲ್ಲ ಊಟ ಸಿಗೋದ್ ಹೇಗೆ?

ಚಂದಮಾಮ: ನಿಜ ಹೇಳು ಪುಟ್‌ಗೌರಿ! ನಿಮ್ಮ ನೆಲಿ ಎಲ್ರಿಗೂ ಊಟ ಸಿಗ್ತಾ ಇದ್ಯಾ?

ಪುಟ್‌ಗೌರಿ : ಇಲ್ಲ. . . .ಇಲ್ಲ. . .ಆದ್ರೆ ಅಮ್ಮ ಪಾತ್ರೆ ತೊಳ್ದು ಬಟ್ಟೆ ತೊಳ್ದು ಮಾಡ್ದಾಗ ಒಂದಿಷ್ಟು ತಂಗ್ಳಾ ಆದ್ರೂ ಕೊಡ್ತಾರಲ್ಲ! ನಾವೆಲ್ಲ ಶಾಲೆಗೆ ಹೋದ್ರೆ ಅದೂ ಇಲ್ಲ. .

ಚಂದಮಾಮ: ನಿನ್ನ ಅಪ್ಪ ಅಮ್ಮ ದುಡಿದಿದ್ದನ್ನ ಮನೆಗೇ ಖರ್ಚು ಮಾಡಿದ್ರೆ ನಿಮ್ಮನ್ನ ಓದಿಸಬಹುದು. ಜೂಜೂ, ಕುಡಿತ, ಇದಕ್ಕೆಲ್ಲ ದುಡ್ಡ ಹಾಕಿದ್ರೆ ಹ್ಯಾಗೆ ಮನೆ ನಡೀತದೆ?

ಪುಟ್‌ಗೌರಿ : ಹೌದು . . . ಮಾಮಾ . . . ನನ್ನ ಅಪ್ಪ ಕುಡ್ದ ಸತ್ಹೋದ. ಈಗ ಅಮ್ಮನೇ ದುಡಿಯಬೇಕು. ನಮ್ಮನ್ನೆಲ್ಲ ಸಾಕ್ಬೇಕು.

ಚಂದಮಾಮ: ಹೀಗೆ ದುಡಿಯೋ ಮಕ್ಳದ್ದು ಒಬ್ಬೊಬ್ಬರದು ಒಂದೊಂದು ಕಥೆ. ನೀನು ಮತ್ತೆ ಶಾಲೆಗೆ ಹೋಗ್ಬೇಕಲ್ವಾ?

ಪುಟ್‌ಗೌರಿ : ಹೌದು . . . .ನಾನಿಲ್ಲಿಂದ ಹೋಗ್ಬೇಕು. ನನ್ನೂರಿಗೆ ಹೋಗ್ಬೇಕು. ಅಮ್ಮ, ತಂಗಿ, ತಮ್ಮಂದ್ರ ಜೊತೆ ಇರ್‍ಬೇಕು, ಶಾಲೆಗೂ ಹೋಗ್ಬೇಕು. ದೊಡ್ಡೋಳಾದ್ಮೇಲೆ ಒಳ್ಳೆ ಕೆಲ್ಸಾ ಮಾಡಿ ಅಮ್ಮನ್ನ ಚೆನ್ನಾಗಿ ನೋಡ್ಕೋಬೇಕು. ಆದ್ರೆ... ಮಾಮಾ ಈ ಮನೆಯಿಂದ ಹೋಗೋದು ಹೇಗೆ? ತಿರುಗಿ ಇಲ್ಲಿ ಬರ್‍ಲಿಕ್ಕೆ ಮನಸ್ಸಿಲ್ಲ ನನಗೆ. ಅವಳ ಗಂಡನ್ನ ಕೈಯಲ್ಲಿ ಸಿಕ್ಕೊಂಡ್ರಂತೂ ಹಿಂಡಿ ಹಿಪ್ಪೆ ಮಾಡ್ತಾನೆ ನನ್ನ ರಾಕ್ಷಸ . . . . (ಅಳುತ್ತಾಳೆ).

ಚಂದಮಾಮ: ಅಳ್ಬೇಡಾ. .. . . ಪುಟ್‌ಗೌರಿ! ನಾನಿದ್ದೀನಲ್ಲ . . . ನಿನ್ನ ಊರಿಗೆ ಕರ್‍ಕೊಂಡ್ ಹೋಗ್ತೇನೆ ನಡಿ, ಇವ್ರಿಗೆಲ್ಲ ಟಾಟಾ ಹೇಳು. (ಪುಟ್‌ಗೌರಿ - ಚಂದಮಾಮಾ ಹೋಗುತ್ತಾರೆ).



## ದೃಶ್ಯ 5

(ಹಿನ್ನೆಲೆಯಲ್ಲಿ ಹಳ್ಳಿಯ ದೃಶ್ಯ ಪುಟ್‌ಗೌರಿ ಮೊದಲಿನಂತಾಗಿದ್ದಾಳೆ. ಪತ್ರ ಬರೆಯುತ್ತಿದ್ದಾಳೆ ಮೊದಲಿನ ಹಾಡಿನ ಹಿನ್ನೆಲೆ).

ಪ್ರೀತಿಯ ಚಂದಾಮಾಮಾ,

ನೀನು ಊರಿಗೆ ಕಳುಹಿಸಿ ಕೊಟ್ಟು ಹೋದ ನಂತರ ಅಮ್ಮನಿಗೆ ಎಲ್ಲ ತಿಳಿಸಿ. ಅವಳನ್ನು ಒಪ್ಪಿಸಿ ಶಾಲೆಗೆ ಹೋಗುತ್ತಿದ್ದೇನೆ. ಜೊತೆಯಲ್ಲಿ ತಮ್ಮ ತಂಗಿಯರನ್ನು ಕೂಡ ಕರೆದುಕೊಂಡು ಹೋಗುತ್ತಿದ್ದೇನೆ. ಶಾಲೆಯಲ್ಲಿ ನಮಗೆಲ್ಲ ಪುಸ್ತಕ, ಸಮವಸ್ತ್ರ, ಊಟ ದೊರೆಯುತ್ತದೆ. ಆದ್ದರಿಂದ ಅಮ್ಮ ಸಂತೋಷವಾಗಿದ್ದಾಳೆ. ನನ್ನಂತೆ ಬಹಳಾ ಮಕ್ಕಳು ಕಷ್ಟದಲ್ಲಿದ್ದಾರೆ. ಅಂತ ನೀನೇ ಹೇಳಿದ್ದೆ ಅಲ್ಲವೇ? ನನ್ನ ಹಾಗೆ ಅವರೆಲ್ಲರಿಗೂ ಶಿಕ್ಷಣ ಸಿಗೋ ಹಾಗೆ ಮಾಡು ಮಾಮಾ. ಅವ್ರ ತಂದೆ ತಾಯಿ ತಮ್ಮ ಮಕ್ಕಳನ್ನು ಶಾಲೆಗೆ ಕಳ್ಸೋ ಹಾಗೆ ಮಾಡು. ಅವ್ರ ಮುಖದಲ್ಲಿ ನಗು ಮೂಡೋ ಹಾಗೆ ಮಾಡು ಮಾಮಾ. ಮತ್ತೆ ನೀನು ಯಾವಾಗ ನನ್ನನ್ನೋಡೋದಕ್ಕೆ ಬರುತ್ತೀಯಾ? ನಾನೀಗ ಎಷ್ಟು ದೊಡ್ಡೋಳಾಗಿ ದ್ದೀನಿ ಗೊತ್ತಿದ್ಯಾ? ನಾನೀಗ ಎಲ್ಲಾ ಓದೋದು ಬರೆಯೋದು ಮಾಡ್ತೀನಿ. ನೀನು ನೋಡಿಲ್ಲ. ಆದ್ದರಿಂದ ನಮ್ಮನೆಗೆ ಒಮ್ಮೆ ಬಂದು

ಹೋಗು. ಬಾಕಿ ಎಲ್ಲಾ ಕ್ಷೇಮ.

ನಾನು ನಿನ್ನ ಕಾಯ್ತಾ ಇರ್ತೀನಿ.

ನಿನ್ನ<br>
ಪುಟ್‌ಗೌರಿ

(ಪುಟ್‌ಗೌರಿ ಪತ್ರ ಮುಗಿಸುತ್ತಿದ್ದಂತೆ ಚಂದಮಾಮ ಬಾಗಿಲಲ್ಲಿ ಕಾಣುತ್ತಾನೆ)

ಪುಟ್‌ಗೌರಿ : ಚಂದಮಾಮಾ! ನಿನ್‌ಗೆ ಪತ್ರ ಹಾಕ್ಬೇಕು ಅನ್ನೋವಷ್ಟರಲ್ಲಿ ನೀನೇ ಬಂದ್ ಬಿಟ್ಯಲ್ಲಾ! ನಿಂಗೆ ಹೇಗೆ ಗೊತ್ತಯ್ತು? ನಾನು ಪತ್ರ ಬರೀತಾ ಇದ್ದೇನೆ ಅಂತ?

ಚಂದಮಾಮ : (ನಗುತ್ತ) ಆಂ......ನಂಗೆ ಎಲ್ಲ ಗೊತ್ತಾಗುತ್ತೆ. ಕಣ್ ಮುಚ್ಚಿದ್ರೆ ಸಾಕು, ಯಾರ್‍ಯಾರು ಏನೇನು ಮಾಡ್ತಾರೆ ಅನ್ನೋದು ಗೊತ್ತಾಗುತ್ತೆ. ಎಲ್ಲಿ ಪತ್ರ ಕೊಡು. (ಪುಟ್‌ಗೌರಿ ಪತ್ರ ಕೊಡುತ್ತಾಳೆ. ಚಂದಮಾಮ ಪತ್ರ ಓದುತ್ತಾನೆ).

ಪುಟ್‌ಗೌರಿ : ಚಂದಮಾಮ ನನ್ನಂತೆ ತೊಂದ್ರೆ ಒಳಗಾದೋರಿಗೆಲ್ಲ ಸಹಾಯ ಮಾಡ್ತೀನಿ ಅಂತ್ಹೇಳಿದ್ಯಲ್ಲಾ? ಏನ್ ಮಾಡ್ದೆ ಅವ್ರಿಗಿ?

ಚಂದಮಾಮ : ನಾನೊಬ್ನೆ ಮಾಡೋದಿಲ್ಲ. ಮಕ್ಕಳ ತಂದೆ-ತಾಯಿ ಜವಾಬ್ದಾರಿ ತಗೋಬೇಕು. ನಿಮ್ಮನ್ನೆಲ್ಲ ಕಾರ್ಮಿಕರಂತೆ ದುಡಿಸಿಕೊಳ್ಳುತ್ತಿರೋ ಈ ನಾಗರಿಕ ಸಮಾಜ ಜವಾಬ್ದಾರಿ ತೊಗೋಬೇಕು. ಬಡತನ, ದೊಡ್ಡ ಕುಟುಂಬ, ತಂದೆ-ತಾಯಿಗಳ ಅನಕ್ಷರತೆ, ಮೂಢ ನಂಬಿಕೆ, ಜೀತಪದ್ಧತಿ, ಪಾಲಕರ ಚಟಗಳು, ಲಿಂಗ ಪಕ್ಷಪಾತ ಇವೆಲ್ಲ ಕಾರಣಗಳಿಂದ ನಮ್ಮ ಮಕ್ಕಳು ಬಾಲಕಾರ್ಮಿಕರಾಗುತ್ತಾರೆ ಆದ್ರೆ ಇವ್ಯಾವು ಮುಖ್ಯ ಕಾರಣಗಳಲ್ಲ.

ಪುಟ್‌ಗೌರಿ : ಅಂದ್ರೆ...! ನನ್ ತಾಯಿ ಕಷ್ಟಕ್ಕೆ ಅಲ್ವ ನಾವ ಪಟ್ಟಣಕ್ಕೆ ಕೆಲ್ಸಕ್ಕೆ ಹೋಗಿದ್ದು!

ಚಂದಮಾಮ : ಹೌದು! ಆದ್ರೆ ನೀನೆಷ್ಟು ಗಳಸ್ಥೆ ಹೇಳು, ತಂಗ್ಯನ್ನ ತಿಂದು ಆರೋಗ್ಯ ಕೆಡ್ಸಕೊಂಡೆ. 50 ರೂಪಾಯಿ ತಿಂಗಳ ಸಂಬಳ. ಇಷ್ಟರಿಂದ ನಿನ್ ಮನೆತೊಂದ್ರೆ ಎಲ್ಲಾ ಹೋಯ್ತಾ ?

ಪುಟ್‌ಗೌರಿ : ಇಲ್ಲ....!

ಚಂದಮಾಮ : ಇದರಿಂದ ನಿಮ್ಮನೆ ಪರಿಸ್ಥಿತಿ ಏನೂ ಸುಧಾರಣೆ ಆಗೋದಿಲ್ಲ. ನಿಮ್ಗೆ ಹೆಚ್ಗೆ ತೊಂದ್ರೆ ಆಗ್ತದೆ. ಮಕ್ಕಳಲ್ಲಿ ಅನಕ್ಷರತೆ, ಬಡತನ, ಅನಾರೋಗ್ಯ ಕುಂಠಿತ ಬೆಳವಣಿಗೆ, ಅವಘಡಗಳು, ಸಾವು, ದುರಾಭ್ಯಾಸ, ಉದ್ಯೋಗದ ಕೊರತೆ, ಕೌಶಲ್ಯರಹಿತರನ್ನಾಗಿಸುತ್ತದೆ. ಆದ್ದರಿಂದ ಆ ಕ್ಷಣದ ಅನುಕೂಲಗಳನ್ನು ನೋಡದೆ ತಂದೆ-ತಾಯಿಯರು ತಮ್ಮ ಮಕ್ಕಳ ಮುಂದಿನ ಭವಿಷ್ಯವನ್ನು ವಿಚಾರ ಮಾಡಬೇಕು. ಮಕ್ಕಳ ಬೆಳವಣಿಗೆ ಭವಿಷ್ಯದಲ್ಲಿ ತಂದೆ-ತಾಯಿಯರ ಪಾಲೇ ದೊಡ್ಡದು.

ಪುಟ್‌ಗೌರಿ : ಚಂದಮಾಮ, ನನಗೆ ಬಹಳ ವಿಷ್ಯಾ ತಿಳ್ಸಿ ಕೊಟ್ಟೆ, ನಾನು ನನ್ನ ಸ್ನೇಹಿತೆಯರಿಗೆ, ಅಮ್ಮಂಗೆ, ತಂಗಿ, ತಮ್ಮನಿಗೆ ಎಲ್ಲರಿಗೂ ಇದನ್ನ ತಿಳ್ಸತೇನೆ.

ಚಂದಮಾಮ : ಹಾಗೇ ಮಾಡು, (ಮುಂದೆ ಬಂದು) ಪುಟ್‌ಗೌರಿ ತಮ್ಮೂರಿಗೆ ಬಂದು ಶಾಲೆಗೆ ಹೋಗ್ತಿದಾಳೆ. ಸಂತೋಷವಾಗಿದ್ದಾಳೆ. ಮತ್ತೆ ಅವಳನ್ನ ಕೆಲಸಕ್ಕೆ ಇಟಗೊಂಡ ಯಜಮಾನತಿ, ಯಜಮಾನ ಇಬ್ಬರಿಗೂ ಜೈಲು ಶಿಕ್ಷೆ ಆಗಿದೆ. ಇದು ಸಣ್ಣ ವಿಷಯ ಅಲ್ಲ. ನಮ್ಮೆಲ್ಲರ ಮಕ್ಕಳ ಭವಿಷ್ಯ, ನಮ್ಮ ಸಮಾಜದ ಭವಿಷ್ಯ ಬಾಲಕಾರ್ಮಿಕ ಪದ್ಧತಿ ನಮ್ಮ ಸಮಾಜಕ್ಕೆ ಅಂಟಿದ ಪಿಡುಗು ಇದ್ದ ಹಾಗೆ. ಈ ಪದ್ಧತಿಯನ್ನು ನಿರ್ಮೂಲನೆ ಮಾಡುವುದರಲ್ಲಿ ನಾವು ನೀವು ಎಲ್ಲರೂ ಕಾಳಜಿವಹಿಸಬೇಕು. ಅದಕ್ಕಾಗಿ ಪ್ರಯತ್ನಿಸಬೇಕು. ಈಗ ಪುಟ್‌ಗೌರಿ ಹೇಗೆ ಕಲೀತಾಳೆ ನೋಡಿ.

**(ಪತ್ರ ಓದಿದ ನಂತರ ಪುಟ್‌ಗೌರಿ ಹಾಡಿಗೆ ಚಂದಮಾಮ ಜೊತೆಯಲ್ಲಿ ಕುಣಿಯುತ್ತಾನೆ).**

## ಹಾಡು

ನಗುತ್ತಾಳೆ, ನಲಿಯುತ್ತಾಳೆ ।
ಹಾಡುತ್ತಾಳೆ, ಗುನುಗುತ್ತಾಳೆ ।
ಜಿಗಿಯುತ್ತಾಳೆ, ಕುಣಿಯುತ್ತಾಳೆ ।
ಪುಟ್‌ಗೌರಿ, ಪುಟ್‌ಗೌರಿ ॥
ಹೊಳೆಯುತ್ತಾವೆ ಕಣ್ಣುಗಳು ।
ಮಿನುಗುತ್ತಾವೆ ಗಲ್ಲಗಳು ।
ಕುಣಿಯುತ್ತಾವೆ ಹೆಜ್ಜೆಗಳು ।
ಸುರಿಯುತ್ತಾವೆ ಮಲ್ಲಿಗೆ ಹೂ ।
ಪುಟ್‌ಗೌರಿ ಪುಟ್‌ಗೌರಿ ॥
(ಬೆಳಕು ನಿಧಾನವಾಗಿ ಬರುತ್ತದೆ).



ಮುಕ್ತಾಯ

# ಸಲಾಕೆ ಗೊಂಬೆ ಮತ್ತು ಕೈಗವಸು ಗೊಂಬೆ ತಯಾರಿಕೆಯ ವಿಧಾನ:

## ಪ್ರಯೋಗ 1



ಚಿತ್ರ -1

ಕಾಗದವನ್ನು ಚಿಕ್ಕ ಚಿಕ್ಕ ಚೂರುಗಳನ್ನಾಗಿ ಕತ್ತರಿಸಿ ಸೋಪು ನೀರಿಗೆ ಕಾಗದದ ಚೂರುಗಳನ್ನು ಹಾಕಿ ಚೆನ್ನಾಗಿ ಕಲಸಬೇಕು. ನಂತರ ಎರಡು ದಿನ ಬಿಟ್ಟು ಸೋಪಲ್ಲಿ ಕರಗಿದ ಕಾಗದ ಚೂರನ್ನು ಒರಟಾದ ನೆಲದ ಮೇಲೆ ಹಾಕಿ ನಯವಾಗುವವರೆಗೂ ತುಳಿಯಬೇಕು. ಈಗ ಪೇಪರ ಸ್ಲರಿ ತಯಾರಾಗುತ್ತದೆ. ನಂತರ ಈ ಸ್ಲರಿಯನ್ನು ಬಟ್ಟೆಯೊಂದರಲ್ಲಿ ಹಾಕಿ ಚೆನ್ನಾಗಿ ಸೋಸಬೇಕು. ಕಾಗದದಲ್ಲಿರುವ ಸೋಪಿನ ಅಂಶಗಳು ಹೋಗುವವರೆಗೂ ನೀರನ್ನು ಹಾಕಿ ಸೋಸುತ್ತಿರಬೇಕು ಈಗ ಪಲ್ಪಗೆ ಸ್ವಲ್ಪ ಚಾಕ್ ಪೌಡರ್ ಹಾಗೂ ಗಮ್ಮನ್ನು ಸೇರಿಸಿ (ಮೈದಾ ಗಂ) ಚೆನ್ನಾಗಿ ಕಲಸಬೇಕು (ಚಪಾತಿ ಹಿಟ್ಟಿನಷ್ಟು ಹದ) ನಂತರ ಸುಮಾರು 1 1/2 ಅಡಿ ಎತ್ತರದ ಪೈಪು (ಸಲಾಕೆ) ಅಥವಾ ಮರದ ತುಂಡನ್ನು ಆಯ್ಕೆ ಮಾಡಿ ಅದಕ್ಕೆ ಕಲಸಿ ಪೇಪರ್ ಪಲ್ಪನಿಂದ ನಮಗೆ ಬೇಕಾದ ರೀತಿಯ ಗೊಂಬೆಗಳನ್ನು ತಯಾರಿಸಬಹುದು.

ಗೊಂಬೆಯನ್ನು ತಯಾರಿಸಿದ ನಂತರ ಚೆನ್ನಾಗಿ ಒಣಗಿಸಿರಿ. ಒಣಗಿದ ಗೊಂಬೆಗೆ ತೆಳುವಾದ ಕಾಟನ್ ಬಟ್ಟೆಯನ್ನು ಚಿಕ್ಕ ಚಿಕ್ಕ ತುಂಡುಗಳಂತೆ ಮಾಡಿ ಅಂಟಿಸಿ ಮತ್ತೆ ಪುನಃ ಚೆನ್ನಾಗಿ ಒಣಗಲು ಬಿಡಿ. ಒಣಗಿದ ನಂತರ ಬೇಕಾದ ಬಣ್ಣವನ್ನು ಹಾಕಿ ಬೇಕಾದ ಪಾತ್ರಗಳನ್ನು ಸೃಷ್ಟಿಸಿರಿ. ಪಾತ್ರಗಳನ್ನು ಸೃಷ್ಟಿಸಿದ ನಂತರ ಚಿತ್ರ 1ರಲ್ಲಿ ಇರುವಂತೆ ಅಡ್ಡ ಪಟ್ಟಿಯನ್ನು ಹಾಕಿರಿ.



ಚಿತ್ರ -2

ತಯಾರಾದ ಗೊಂಬೆಗೆ ಚಿತ್ರ 2 ರಲ್ಲಿರುವಂತೆ ಅಂಗಿಯನ್ನು ಹಾಕಿ ಗೊಂಬೆಯನ್ನು ಕುಣಿಸಿರಿ.

# ಪ್ರಯೋಗ 2

ತಯಾರಿಸುವ ವಿಧಾನ:

ಅವೆ ಮಣ್ಣು (ಜೇಡಿ ಮಣ್ಣು) ಹದ ಮಾಡಿದ ಮೇಲೆ ಬೇಕಾದ ರೀತಿಯ ಗೊಂಬೆಯನ್ನು ತಯಾರಿಸಿದ ನಂತರ ನೆರಳಲ್ಲಿ ಒಣಗಲು ಬಿಡಿ. ಒಣಗಿದ ಮಣ್ಣಿನ ಗೊಂಬೆಗೆ ಕಾಗದದ ಚಿಕ್ಕ ಚಿಕ್ಕ ಚೂರುಗಳನ್ನು ಅಂಟಿಸಬೇಕು. ಆದರೆ ಗೊಂಬೆಗೆ ಮೊದಲು ಹಚ್ಚುವ (ಅಂಟಿಸುವ) ಕಾಗದದ ಚೂರಿನಲ್ಲಿ ಗಂ ಇರಬಾರದು. ಸೋಪ್ ನೀರಿನಲ್ಲಿ ಅದ್ದಿದ ಕಾಗದದ ಚೂರು ಒಂದು ಸುತ್ತು ಹಚ್ಚಿದರೆ ಸಾಕು ನಂತರ ಗಂ (ಮೈದಾ ಗಂ) ಅಥವಾ ಬೇರೆ ಗಂ ಅಂಟು ಬಳಸಿ ಕಾಗದದ ಚೂರುಗಳನ್ನು ಅಂಟಿಸುತ್ತಾ ಹೋಗಬೇಕು. ಒಟ್ಟು 7 ಲೇಯರ್ ಪೇಪರ್ ಅಂಟಿಸಬೇಕಾಗುತ್ತದೆ. ಒಮ್ಮೆ ಇಂಗ್ಲಿಷ್ ಪತ್ರಿಕೆ ಚೂರು, ನಂತರ ಒಂದು ಸುತ್ತು ಕನ್ನಡ ಪತ್ರಿಕೆ ಚೂರುಗಳನ್ನು ಅಂಟಿಸಿ ಈ ವಿಧಾನದಿಂದ ಲೇಯರ್‌ಗಳು ಗೊತ್ತಾಗಲು ಮಾತ್ರ ಇಲ್ಲದಿದ್ದರೆ ಪೇಪರ್ ಹಚ್ಚಿದಲ್ಲೆ ಹಚ್ಚುವ ಸಾಧ್ಯತೆ ಹೆಚ್ಚು. 7 ಲೇಯರ್ ಪೇಪರ್ ಸುತ್ತು ಅಂಟಿಸಿದ ಮೇಲೆ ಆಯವಾಗಿ ಕಾಟನ್ ಬಟ್ಟೆಯನ್ನು ಚಿಕ್ಕ ಚಿಕ್ಕದಾಗಿ ಕತ್ತರಿಸಿ ಗೊಂಬೆಗೆ ಅಂಟಿಸಿ ಚೆನ್ನಾಗಿ ಒಣಗಿಸಿರಿ. ಒಣಗಿದ ಗೊಂಬೆಯನ್ನು ನಡು ಭಾಗವಾಗಿ ಕತ್ತರಿಸಿ ಮಣ್ಣಿನಿಂದ ಬೇರ್ಪಡಿಸಿ.

ಗೊಂಬೆಯ ಹಿಂಬದಿ ಹಾಗೂ ಮುಂಬದಿ ಸಿಗುತ್ತದೆ. ಪುನಃ ಅದನ್ನು ಅಂಟಿನ ಸಹಾಯದಿಂದ ಅಂಟಿಸಿ ಸರಿಮಾಡಿ ಗೊಂಬೆ ಟೊಳ್ಳಾಗಿ ಹಗುರವಾಗುತ್ತದೆ. ನಂತರ ಸಲಾಕೆಯೊಂದನ್ನು ಗೊಂಬೆಯ ಒಳಗೆ ತಳ್ಳಿ ಮೊಳೆ ಹೊಡೆದು ಗಟ್ಟಿಗೊಳಿಸಿ. ಸಲಾಕೆ ಎಂದರೆ ಮರ, ಪೈಪು, ಬಿದಿರು ಯಾವುದು ಆಗುತ್ತದೆ. ಮಳೆ ಹಾಕಿದ ನಂತರ ಕೆಳಭಾಗವನ್ನು ಗಂನಿಂದ ಅಂಟಿಸಿ ನಂತರ ಅಡ್ಡ ಸಲಾಕೆ ಬಡಿದು ಅಂಗಿ ಹಾಕಿ ಪ್ರಯೋಗ 1ರಲ್ಲಿ ಹೇಳಿದಂತೆ ಕುಣಿಸಿರಿ.

# ಕೈಚೀಲದ ಗೊಂಬೆ

ಕಾಗದ ಚೂರುಗಳನ್ನು ಗಂ ಮಿಶ್ರಣದೊಂದಿಗೆ ಚೆನ್ನಾಗಿ ಹಿಂಡಿ ಬಾಲ್ ಆಕೃತಿಯನ್ನು (ಅಥವಾ ಕೋಳಿ ಮೊಟ್ಟೆಯಾಕೃತಿ (Oval Shape)) ಮಾಡಿಕೊಳ್ಳಿ. ನಂತರ ಈ ಆಕೃತಿಗೆ ಚಿಕ್ಕ ಚಿಕ್ಕದಾದ ಕಾಟನ್ ಬಟ್ಟೆಯನ್ನು ಅಂಟಿಸಿರಿ. ಕಾಟನ್ ಬಟ್ಟೆಯಿಂದಲೇ ಕಿವಿ, ಮೂಗು, ಹುಬ್ಬು, ಬಾಯಿ ರಚಿಸಿ ಗೊಂಬೆಯ ತಲೆಯನ್ನು ರಚಿಸಿರಿ. ಒಣಗಿಸಿರಿ, ಒಣಗಿದ ಗೊಂಬೆಯ ತಲೆಗೆ ಕೊಳವೆಯೊಂದನ್ನು ಅಂಟಿಸಬೇಕು.



ಚಿತ್ರ : 3

ಈ ಕೊಳವೆಯು ನಮ್ಮ ಮಧ್ಯದ ಬೆರಳು ಹೋಗುವಷ್ಟೆ ದೊಡ್ಡದಾಗಿರಬೇಕು. ಇಷ್ಟಾದ ಮೇಲೆ ಗೊಂಬೆಗೆ ಬೇಕಾದ ಬಣ್ಣವನ್ನು ಅಂದಗೊಳಿಸಿರಿ ನಂತರ ಕೈಚೀಲವೊಂದನ್ನು ಹೊಲಿದುಕೊಳ್ಳಬೇಕು. ಚಿತ್ರ– 3 ನೋಡಿ. ಈ ಕೈಚೀಲದ ಅಂಗಿಯ ಎರಡೂ ಕೈಗಲು ನಮ್ಮ ಕಿರುಬೆರಳು ಹಾಗೂ ಹೆಬ್ಬೆರಳು ಹೋಗುವಂತಿರಬೇಕು. ಈಗ ಕೊಳವೆಗೆ ಕೈಚೀಲದ ಕತ್ತಿನ ಭಾಗವನ್ನು ಗಟ್ಟಿಯಾಗಿ ಅಂಟಿಸಬೇಕು.

ಈಗ ನಿಮ್ಮ ಕೈಯನ್ನು ಕೈಚೀಲದ ಅಂಗಿಯೊಳಗೆ ಹಾಕಿದ ಮೇಲೆ ಮಧ್ಯದ ಬೆರಳನ್ನು ಗೊಂಬೆಯ ತಲೆಯೂ ಕೊಳವೆಗೆ ತುರುಕಿಸಿ ಉಳಿದ ಹೆಬ್ಬೆರಳು ತೋರು ಬೆರಳನ್ನು ಹಾಗೂ ಕಿರುಬೆರಳು ಉಂಗುರ ಬೆರಳನ್ನು ಕ್ರಮವಾಗಿ ಗೊಂಬೆಯ ಎರಡೂ ಕೈಗಳಿಗೆ ತುರುಕಿಸಿ ಗೊಂಬೆಯನ್ನು ಆಡಿಸಿರಿ.

# ಭಾಗ 2








# ಗೊಂಬೆ ಆಟದ ಲೋಕ

## 2.1 ಗೊಂಬೆ ಆಟದ ಸ್ವರೂಪ

ಸಂಸ್ಕೃತ ನಾಟಕಗಳಲ್ಲಿ 'ಸೂತ್ರಧಾರ' ಎಂಬ ಪಾತ್ರ ಬಹುಶಃ ಎಲ್ಲ ನಾಟಕಗಳಲ್ಲಿ ಬರುತ್ತದೆ. ಸುಮಾರು 2000 ವರ್ಷಗಳ ಹಿಂದಿನ ಇತಿಹಾಸವುಳ್ಳ ಸಂಸ್ಕೃತ ನಾಟಕಗಳಲ್ಲಿ ಈ ಪಾತ್ರ ಪ್ರಯೋಗವಾದದ್ದು ಬಹುಶಃ ಆ ಹಿಂದೆ ಇದ್ದ ಗೊಂಬೆ ಆಟವನ್ನು ನೋಡಿರಬಹುದು. ಈ ಸೂತ್ರಧಾರ ಪರಿಕಲ್ಪನೆಯೆ ಗೊಂಬೆ ಆಟದ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಒಂದು ದಾರಿಯಾಗುತ್ತದೆ. ಒಂದು ರಂಗ ಪ್ರಯೋಗಕ್ಕೆ ಅದು ವರ್ತಮಾನದಲ್ಲಿ ಪ್ರಯೋಗಗೊಳ್ಳುತ್ತಿದ್ದು, ಇಡೀ ರಂಗ ಕ್ರಿಯೆಯನ್ನು ನಿರ್ದೇಶಿಸಬಲ್ಲ, ನಿಯಂತ್ರಿಸಬಲ್ಲ ಒಂದು ವ್ಯಕ್ತಿಯ ಪ್ರವೇಶ ಅವಶ್ಯಕತೆ ಇದ್ದು, ನಿರೂಪಣಾತ್ಮಕ ಕಥಾ ಕಥನದಲ್ಲಿ ನಂಬಿಕೆ ಉಳ್ಳ ಭಾರತೀಯ ರಂಗ ಪರಂಪರೆಯು ಸೂತ್ರಧಾರ ಎಂಬ ಪಾತ್ರವನ್ನು ಹುಟ್ಟು ಹಾಕಿಕೊಂಡಿತು.

ಬಹುಶಃ ಈ ಪಾತ್ರದ ಪ್ರವೇಶ ಆ ಹಿಂದೆ ಇದ್ದ ಸೂತ್ರದ ಗೊಂಬೆ ಆಟದಿಂದಲೇ ತೆಗೆದುಕೊಂಡಿರಬಹುದಾದ ಸಾಧ್ಯತೆಗಳಿವೆ. ಗೊಂಬೆಗಳಿಗೆ ಜೀವವಿರುವುದಿಲ್ಲ. ಅದಕ್ಕೆ ಜೀವ ತುಂಬುವವ(ಳು) ಅದನ್ನು ತನ್ನ ವಿದ್ವತ್ತಿಗೆ ತಕ್ಕಂತೆ ಆಡಿಸುವನು. ಬಹುಶಃ ಆಚರಣೆಗಳಲ್ಲಿ ನಂಬಿಕೆಯುಳ್ಳ ನಾವು ಈ ಪ್ರಾಕೃತಿಕ ವಿನಾಶ ವಿಕೋಪಗಳ ಭಯದಿಂದ ದೂರವಾಗಲು ನಿಯಂತ್ರಿಸಲು ಅಥವಾ ಒಲಿಸಿಕೊಳ್ಳಲು ಆ ಪ್ರಕೃತಿಗೆ ಒಂದು ಆಕೃತಿ ಕೊಟ್ಟು ಅದನ್ನು ಆರಾಧಿಸುವ ಮೂಲಕ ನಮ್ಮ ಜೀವನದಲ್ಲಿ ನೆಮ್ಮದಿ ಶಾಂತಿ ಕಾಪಾಡಿಕೊಳ್ಳಬಹುದು ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಈ ಪ್ರಕೃತಿಗೆ ಆಕೃತಿ ಕೊಡುವ ಒಂದು ಪ್ರಕ್ರಿಯೆಯಿಂದ ಗೊಂಬೆ ಆಟ ಹುಟ್ಟಿಕೊಂಡಿರಬಹುದು. ಹೀಗೆ ಗೊಂಬೆ ಆಟದಲ್ಲಿ ಈ ಜೀವ ತುಂಬುವ ಕಲೆ ವಿಶಿಷ್ಟವಾದುದರಿಂದ ಬಹಳಷ್ಟು ಸಾಮಾಜಿಕ ಅನಿಷ್ಟಗಳನ್ನು ತೊಡೆದು ಹಾಕಲು ಜನರಲ್ಲಿ ಸಾಮಾಜಿಕ ಅರಿವು ಮೂಡಿಸಲು ಈ ಮಾಧ್ಯಮವನ್ನು ಸಮರ್ಪಕವಾಗಿ ಬಳಸಿಕೊಳ್ಳಬಹುದು.

ಸಾಮಾನ್ಯವಾಗಿ ಗೊಂಬೆ ಆಟದಂತಹ ಪ್ರದರ್ಶನ ಕಲಾ ಮಾಧ್ಯಮ ಆಧುನಿಕ ರಂಗಭೂಮಿ ಸಂದರ್ಭದಲ್ಲಿ ಮಕ್ಕಳ ಮನರಂಜನೆಗಾಗಿ ಮೀಸಲಾದ ಪ್ರತ್ಯೇಕ ರಂಗ ಮಾಧ್ಯಮ ಎಂದು ತಿಳಿಯಲಾಗಿದೆ. ಅದರಲ್ಲೂ ಭಾರತೀಯ ಪ್ರದರ್ಶಕ ಕಲಾ ಸಂದರ್ಭದಲ್ಲಿ ಈ ಮಾತು ಸತ್ಯ. ಗೊಂಬೆ ಆಟವನ್ನು ಮುಖ್ಯವಾಹಿನಿ ರಂಗ ಪ್ರಕಾರವಾಗಿ ಇನ್ನ ಪರಿಗಣಿಸುತ್ತಿಲ್ಲ. ಪಾಶ್ಚಾತ್ಯ ದೇಶಗಳಿಗೆ ಹೋಲಿಸಿದರೆ ಈ ಮಾಧ್ಯಮ ಅಲ್ಲಿ ಆಧುನಿಕವಾಗಿ ಸಾಕಷ್ಟು ಬೆಳವಣಿಗೆ ಹೊಂದಿದೆ. ನಮ್ಮ ದೇಶದಲ್ಲಿ ಈ ಮಾಧ್ಯಮವನ್ನು ಆಧುನಿಕವಾಗಿ ಬೆಳೆಸಲು ಕೆಲ ಪ್ರಯತ್ನಗಳು ನಡೆದಿದ್ದರೂ ಇನ್ನೂ ಸಾಕಷ್ಟು ಆಧುನಿಕ ಪ್ರಯೋಗಗಳು ನಡೆಯಬೇಕು. ಹಾಗೂ ಮುಖ್ಯವಾಹಿನಿಯ ರಂಗ ಪ್ರಕಾರವಾಗಿ ಪ್ರಚಾರ ಪ್ರಸಿದ್ಧಿ ಪಡೆದಿಲ್ಲ. ಗೊಂಬೆ ಆಟಕ್ಕೆ ಸಾವಿರಾರು ವರ್ಷಗಳ ಹಿಂದಿನ ಇತಿಹಾಸವಿದೆ. ಚೀನಾ ಮತ್ತು ಭಾರತ ದೇಶವೆ ಈ ಮಾಧ್ಯಮದ ಆವಿಷ್ಕಾರಕ್ಕೆ ಮೂಲ ಪ್ರದೇಶಗಳು ಎಂದು ವಿದ್ವಾಂಸರು ಚರ್ಚಿಸುತ್ತಾರೆ. ಆದರೆ ಭಾರತದಲ್ಲಿ ಗೊಂಬೆ ಆಟದಂತಹ ಮಾಧ್ಯಮವು ಸ್ಪಷ್ಟ ರಂಗ ಪ್ರಕಾರವಾಗಿ ರೂಪ ಪಡೆದದ್ದು ಮುನ್ನೂರು ನಾನೂರು ವರ್ಷಗಳಿಂದೀಚೆಗೆ ಎಂದು ರಂಗಭೂಮಿ ಇತಿಹಾಸಕಾರರು ತಿಳಿಸುತ್ತಾರೆ.

ಬಹುಶಃ ಎಲ್ಲ ಜನಪದ ಕಲೆಗಳಂತೆ ಗೊಂಬೆ ಆಟವೂ ಈ ದೇಶದ ಮಧ್ಯಕಾಲೀನ ಸಮಯದಲ್ಲಿ (Bhakti Movement) ಈ ಮಾಧ್ಯಮ ಪ್ರಚಾರ ಪಡೆದಿರಬಹುದು. ಹೀಗಾಗಿ ಗೊಂಬೆ ಆಟವನ್ನು ಜನಪದ ಆಟವೆಂದೇ ಗುರ್ತಿಸುತ್ತಾರೆ. ಅದರಲ್ಲೂ ಸೂತ್ರದ ಗೊಂಬೆ ಆಟ (Marionetts) ಮತ್ತು ತೊಗಲು ಗೊಂಬೆ ಆಟಗಳು (Leather Shadow Puppets) ಶುದ್ಧ ಜನಪದ ರಂಗ ಪ್ರಕಾರಗಳೇ ಆಗಿವೆ. ಕೈಗವಸು ಮತ್ತು ಸಲಾಕೆ ಗೊಂಬೆ ಆಟಗಳು ಜನಪದ ಆಟಗಳಾದರೂ ಅವುಗಳು ಸೂತ್ರ ಮತ್ತು ತೊಗಲು ಗೊಂಬೆಗಳಷ್ಟು ಪ್ರಸಿದ್ಧಿ ಪಡೆದಿಲ್ಲ. ಆದರೆ ಆ ಗೊಂಬೆ ಆಟಗಳಲ್ಲಿ ಆಧುನಿಕ ಪ್ರಯೋಗಗಳು ಆಗುತ್ತಲಿವೆ. ಒಟ್ಟಾರೆ ಗೊಂಬೆ ಆಟಗಳಲ್ಲಿ ಸೂತ್ರದ ಗೊಂಬೆ ಆಟ (String Puppetry/Marionetts.), ತೊಗಲು ಗೊಂಬೆ ಆಟ/ನೆರಳು ಗೊಂಬೆ ಆಟ (Shadow Puppetrty), ಸಲಾಕೆ ಗೊಂಬೆ ಆಟ (Rod Puppetry), ಕೈಗವಸು ಗೊಂಬೆ ಆಟ (Glow Puppetry) ಹೀಗೆ ನಾಲ್ಕು ಗೊಂಬೆ ಆಟ ಪ್ರಕಾರಗಳು ಪ್ರಮುಖವಾಗಿವೆ. ಭಾರತ ದೇಶದಲ್ಲೂ ಈ ನಾಲ್ಕು ಗೊಂಬೆಗಳ ಪ್ರಕಾರಗಳು ಪ್ರಚಲಿತವಾಗಿವೆ. ಅವುಗಳ ಸ್ಥೂಲ ಪರಿಚಯವನ್ನು ಈ ಭಾಗದಲ್ಲಿ ಮಾಡಿಕೊಳ್ಳಬಹುದು.



## 2.2 ಸೂತ್ರದ ಗೊಂಬೆಯಾಟ (String Puppetry/ Marionettes):

ಸೂತ್ರದ ಗೊಂಬೆಯಾಟ, ಇದಕ್ಕೆ ಮಾರಿಯೋನೆಟ್ (Marionett) ಎಂದು ಯುರೋಪ ದೇಶಗಳಲ್ಲಿ ಕರೆಯುತ್ತಾರೆ. ಜಾಗತಿಕ ಮಟ್ಟದಲ್ಲಿ ಬಹಳ ದೇಶಗಳು ಈ ಗೊಂಬೆ ಆಟದ ಪರಂಪರೆಯನ್ನು ಹೊಂದಿವೆ. ಹಗುರವಾದ ಕಟ್ಟಿಗೆ ತುಂಡು ಅಥವಾ ತೋಯಿಸಿ ಒಣಗಿಸಿದ ಕಾಗದದ ಗಟ್ಟಿಯಾದ ಮುದ್ದೆ (Paper Mesh or pulp), ಹಾಗೂ ಬಟ್ಟೆಯಿಂದ ವಿವಿಧ ಆಕೃತಿಯ ಗೊಂಬೆಗಳನ್ನು ಮಾಡುತ್ತಾರೆ. ಮನುಷ್ಯಾಕೃತಿಗಳಲ್ಲದೆ ಪ್ರಾಣಿ ಪಕ್ಷಿ ಅಥವಾ ಯಾವುದೋ ಕಾಲ್ಪನಿಕ ಆಕೃತಿಗಳ ಗೊಂಬೆಗಳನ್ನು ಕಲಾವಿದ ತನ್ನ ಕಲ್ಪನೆಯ ಶಕ್ತಿಗೆ ಅನುಗುಣವಾಗಿ ಕೆತ್ತಿ ಗೊಂಬೆಗಳನ್ನು ವಿನ್ಯಾಸಗೊಳಿಸಲಾಗುತ್ತದೆ. ದೇಹದ ಆಕೃತಿಯಲ್ಲಿನ ವಿವಿಧ ಜೋಡಣೆಗಳಿಗ ದಾರದ ಆಧಾರದ ಮೂಲಕ ಗೊಂಬೆಗಳಿಗೆ ಚಲನೆ ಕೊಡಬಹುದು.

ಭಾರತದ ಉತ್ತರ ಭಾಗದಲ್ಲಿ ಸೂತ್ರದ ಗೊಂಬೆ ಆಟ ಪ್ರಚಲಿತವಿದೆ. ರಾಜಸ್ಥಾನ ರಾಜ್ಯವು ಸೂತ್ರದ ಗೊಂಬೆ ಆಟಕ್ಕೆ ಕೇಂದ್ರ ಸ್ಥಾನವಾಗಿದೆ. ಸೂತ್ರದ ಗೊಂಬೆಗಳ ತಯಾರಿಕೆ ಅಲ್ಲಿ ಗೃಹ ಕೈಗಾರಿಕೆ ಮಟ್ಟದಲ್ಲಿ ಬೆಳೆದಿದೆ. ರಾಜಸ್ಥಾನದ ಕಟಪುತಲಿ ಸೂತ್ರದ ಗೊಂಬೆ ಆಟ ಹಾಗೂ ಗೊಂಬೆಗಳಿಗೆ ಅಂತರ್ರಾಷ್ಟ್ರಾಯ ಮಟ್ಟದಲ್ಲಿ ಮಾನ್ಯತೆ ಇದೆ. ಜನಪದ ರಂಗ ಪ್ರಕಾರವಾಗಿ ರಾಜಸ್ಥಾನದ ಸೂತ್ರದ ಗೊಂಬೆ ಆಟ ಈಗಲೂ ತನ್ನ ವೈಶಿಷ್ಟ್ಯತೆಯನ್ನು ಕಾಯ್ದುಕೊಂಡಿದೆ.

ಕರ್ನಾಟಕದಲ್ಲಿ ಕರಾವಳಿ ಭಾಗದಲ್ಲಿ ಯಕ್ಷಗಾನ ಸೂತ್ರದ ಗೊಂಬೆ ಆಟ ಹಾಗೂ ರಾಣೆಬೆನ್ನೂರು ತಾಲೂಕಿನಲ್ಲಿ ದೊಡ್ಡಾಟದ ಗೊಂಬೆ ಆಟ, ನಾಗಮಂಗಲ ಹಾಗೂ ಮೈಸೂರು ಮತ್ತು ಕೆಲ ಉತ್ತರ ಕರ್ನಾಟಕದ ಭಾಗದ ವಿಶ್ವಕರ್ಮ ಜನಾಂಗದವರು ಸೂತ್ರದ ಗೊಂಬೆ ಆಟವನ್ನು ಆಡುತ್ತಾರೆ. ಆದರೂ ವರ್ತಮಾನದ ಸಂದರ್ಭದಲ್ಲಿ ಕರಾವಳಿಯ ಕುಂದಾಪುರದ ಕೊಗ್ಗಾ ಕಾಮತ್ ಇವರ ತಂಡವನ್ನು ಬಿಟ್ಟರೆ ಸೂತ್ರದ ಗೊಂಬೆಯಾಟವನ್ನು ನಿರಂತರವಾಗಿ ಪಾರಂಪರಿಕವಾಗಿ ಅನುಸಂಧಾನ ಮಾಡುವ ತಂಡಗಳು ಕರ್ನಾಟಕದಲ್ಲಿ ಬಹಳ ಕಡಿಮೆ.

# 2.3 ತೊಗಲು ಗೊಂಬೆಯಾಟ ಅಥವಾ ನೆರಳು ಗೊಂಬೆಯಾಟ (Leather or Shadow Puppetry):

ಸೂತ್ರದ ಗೊಂಬೆ ಆಟದಂತೆ ತೊಗಲು ಗೊಂಬೆ ಆಟಕ್ಕೂ ನೂರಾರು ವರ್ಷಗಳ ಇತಿಹಾಸವಿದೆ. ಭಾರತವೂ ಸೇರಿದಂತೆ ಇರಾಣ್, ಜಾವಾ, ಸುಮಾತ್ರ, ಮಲೇಶಿಯಾ, ಬರ್ಮಾ ಈ ದೇಶಗಳಲ್ಲಿ ತೊಗಲು ಗೊಂಬೆ ಆಟವು ಪ್ರಚಲಿತವಿದೆ. ಭಾರತದಲ್ಲಿ ಇದು ಜನಪದ ಆಟವಾಗಿ ಪ್ರಸಿದ್ಧಿ ಪಡೆದಿದೆ. ದಕ್ಷಿಣ ಭಾರತದ ರಾಜ್ಯಗಳಲ್ಲಿ ತೊಗಲು ಗೊಂಬೆ ಆಟವನ್ನು ಆಡುವ ತಂಡಗಳಿವೆ. ಒರಿಸ್ಸಾದಲ್ಲಿ ಈ ಆಟವು "ರಾವಣ ಛಾಯಾ" ಎಂದು ಪ್ರಚಲಿತವಿದೆ. ಮಲೇಶಿಯಾ ದೇಶದಲ್ಲಿ ಈ ಆಟವನ್ನು "ವಯಾಂಗ್ ಕುಲಿತ್" ಎಂಬ ಹೆಸರಿನಿಂದ ಕರೆಯುತ್ತಾರೆ.

ಹದಮಾಡಿದ ಜಿಂಕೆಯ ಚರ್ಮ, ಒಂಟೆ ಚರ್ಮ ಅಥವಾ ಆಡಿನ ಚರ್ಮದ ಮೇಲೆ ವರ್ಣಮಯ ಚಿತ್ತಾರವನ್ನು ಬಿಡಿಸಿ ಅದಕ್ಕೆ ಬಿದಿರಿನ ಒಂದು ಕಡ್ಡಿಯನ್ನು ಸೀಳಿ, ಸಿಕ್ಕಿಸಿ ಹಾಕಿ, ಒಂದು ಬಿಳಿಯ ಪರದೆಯ ಮೇಲೆ ಹಿಂದಿನಿಂದ ಬೆಳಕು ಬಿಟ್ಟು ಆ ಪರದೆ ಮೇಲೆ ಅದರ ನೆರಳಿನ (Sillout) ವಿವಿಧ ವಿನ್ಯಾಸಗಳನ್ನು ತೋರಿಸಿ ಆಡುವ ಆಟವೇ ತೊಗಲು ಗೊಂಬೆ ಆಟ. ಮಹಾರಾಷ್ಟ್ರದ 'ಚಿತ್ರಪಟ ಕಥೆ' ಎಂಬ ಕಲಾಪ್ರಕಾರದ ಕಥೆ (16ನೆ ಶತಮಾನ) ಹೇಳುವ ರೂಢಿಯಿಂದ ತೊಗಲು ಗೊಂಬೆ ಆಟವು ಪ್ರಚಲಿತವಾಯಿತು ಎಂದು ಹೇಳುತ್ತಾರೆ. ಚಿತ್ರಪಟಕಥೆ ಎಂದರೆ ರಾಮಾಯಣ ಅಥವಾ ಮಹಾಭಾರತದ ಕಥಾ ಭಾಗದ ಕೆಲವು ಸನ್ನಿವೇಷಗಳ ಚಿತ್ರಗಳನ್ನು ಇಟ್ಟುಕೊಂಡು ಕಥೆಯನ್ನು ಹೇಳುತ್ತಾ ಹೋಗುವ ಒಂದು ಜನಪದ ಪ್ರದರ್ಶಕ ಕಲೆ. ಮಹಾರಾಷ್ಟ್ರದಲ್ಲಿ ಮಧ್ಯಯುಗದ ಕಾಲದಲ್ಲಿ ಈ ಕಲೆ ಪ್ರಚಲಿತವಿತ್ತು. ಅದೇ ನೆರಳುಗೊಂಬೆ ಆಟಕ್ಕೆ ಬುನಾದಿ ಎಂದು ಹೇಳುತ್ತಾರೆ. ಮಹಾರಾಷ್ಟ್ರ ಮೂಲದ ಈ ಆಟ ಆಡುವ ಅಲೆಮಾರಿ ಜನಾಂಗವನ್ನು 'ಕಿಳ್ಳಿಕ್ಯಾತ' ಅಥವಾ 'ಶಿಳ್ಳೆಕ್ಯಾತ'ರೆಂದೇ ಗುರುತಿಸಲ್ಪಡುತ್ತಾರೆ. ಇವರ ಮೂಲಭಾಷೆ ಮರಾಠಿ. ಈ ಜನಾಂಗವು ದಕ್ಷಿಣ ಭಾರತದಾದ್ಯಂತ ಈಗ ಚೆದುರಿ ಹೋಗಿದೆ. ಹಾಗೆ ಅವರು ಆಡುವ ಭಾಷೆ ಕೂಡ ಮರಾಠಿಯೊಂದಿಗೆ ಆ ಸ್ಥಳೀಯ ಭಾಷೆ ಬೆರೆಕೆಯಾಗಿ ಆ ಸ್ಥಳೀಯ accent ಅವರಾಡುವ ಮರಾಠಿ ಭಾಷೆಗೆ ಪ್ರಾಪ್ತವಾಗಿದೆ. ಕರ್ನಾಟಕದಲ್ಲಿ ಈ ಜನಾಂಗವನ್ನು 'ಕಿಳ್ಳಿಕ್ಯಾತ'ರೆಂದೇ ಗುರುತಿಸುತ್ತಾರೆ. ಹಾಗೆ ಅವರಾಡುವ ಆಟವನ್ನು 'ಕಿಳ್ಳಿಕ್ಯಾತ'ರಾಟವೆಂದು ಕರೆಯುತ್ತಾರೆ.

ಕರಾವಳಿ ಭಾಗವನ್ನು ಮತ್ತು ಮಲೆನಾಡಿನ ಭಾಗವನ್ನು ಬಿಟ್ಟರೆ ಕರ್ನಾಟಕದಾದ್ಯಂತ ಈ ಆಟ ಪ್ರಚಲಿತವಿದೆ. ಮನುಷ್ಯಾಕೃತಿಯ ಗೊಂಬೆಗಳಿಂದ ಹಿಡಿದು ಕುಸುರಿ ಕೆಲಸ ಮಾಡಿದ ಚಿಕ್ಕ ತೊಗಲು ಗೊಂಬೆಗಳನ್ನು ಈ ಆಟಕ್ಕಾಗಿ ಬಳಸುತ್ತಾರೆ. ಆಂಧ್ರಪ್ರದೇಶದಲ್ಲಿ ಈ ಆಟವು ತುಂಬಾ ಪ್ರಚಲಿತವಿದೆ. ಅಲ್ಲಿ ಈ ಆಟವನ್ನು 'ತೋಲು ಬೊಮ್ಮಲಾಟ' ಎಂದು ಕರೆಯುತ್ತಾರೆ. ಕರ್ನಾಟಕದ ಬಳ್ಳಾರಿ ಜಿಲ್ಲೆ, ಮಂಡ್ಯ ಹಾಗೂ ಕೋಲಾರ ಜಿಲ್ಲೆಗಳಲ್ಲಿ ಈ ಆಟವನ್ನು ಆಡುವ ತಂಡಗಳು ಈಗಲೂ ಅಲ್ಲಲ್ಲಿ ಉಳಿದುಕೊಂಡಿವೆ. ಮಹಾರಾಷ್ಟ್ರದಲ್ಲಿ ಇದನ್ನು 'ಕಿತಲಿ ಭಾವಲಿಖೇಲ' ಎಚಿದೂ, ತಮಿಳು ನಾಡು ಹಾಗೂ ಕೇರಳ ನಾಡಿನಲ್ಲಿ 'ತೋಲಪಾವೈ ಕೂತು' ಎಂದು ಕರೆಯುತ್ತಾರೆ. ಹಿಂದೆ ಜಿಂಕೆ ಚರ್ಮದ ಉಪಯೋಗ ಮಾಡುತ್ತಿದ್ದು, ಈಗ ಕಾನೂನು ಬಾಹಿರ ಚಟುವಟಿಕೆ ಆಗಿದೆ. ಆದರೆ ಹಿಂದೆ ಜಿಂಕೆ ಚರ್ಮ ಬಳಕೆಯ ರೂಢಿ ಇತ್ತು.





ಪಾರಂಪರಿಕವಾಗಿ ನೆರಳು ಗೊಂಬೆಯಾಟದ, ಒಂದು ಸರಳ ವಿನ್ಯಾಸ

## 2.4 ಸಲಾಕೆ ಗೊಂಬೆಯಾಟ (Rod Puppetry):



ಸೂತ್ರದ ಗೊಂಬೆ ಹಾಗೂ ಸಲಾಕೆ ಗೊಂಬೆಯಲ್ಲಿ ಮುಖ್ಯ ವ್ಯತ್ಯಾಸ ಅಂದರೆ ಸೂತ್ರದ ಗೊಂಬೆಗಳನ್ನು ಗೊಂಬೆಯ ವಿವಿಧ ಜೋಡಣೆಗಳಿಗೆ ಕಟ್ಟಿದ ಸೂತ್ರಗಳನ್ನು ಹಿಡಿದು ಮೇಲಿನಿಂದ ಆಡಿಸುತ್ತಾರೆ. ಸಲಾಕೆ ಗೊಂಬೆಗಳನ್ನು ಆ ಜೋಡಣೆಗೆ ಬಿಗಿದ ಸಪೂರಾದ ಸಲಾಕೆಗಳ ಮೂಲಕ ಕೆಳಗಿನಿಂದ ಆಡಿಸುತ್ತಾರೆ. ವ್ಯತ್ಯಾಸಕ್ಕಾಗಿ 'ಚಿತ್ರ ಗಮನಿಸಿ'.

ಸಲಾಕೆ ಗೊಂಬೆಗಳ ಬಳಕೆ ಇತ್ತೀಚೆಗೆ ಹೆಚ್ಚಿಗೆ ಪ್ರಚಲಿತಗೊಳ್ಳುತ್ತಿದೆ. ಇದರ ಚರಿತ್ರೆ ಸೂತ್ರದ ಗೊಂಬೆ ಹಾಗೂ ತೊಗಲು ಗೊಂಬೆಯಷ್ಟು ಹಿಂದಕ್ಕೆ ಹೋಗುವುದಿಲ್ಲ. ಬಹಳ ಅಂದರೆ 150 ರಿಂದ 200 ವರ್ಷದ ಇತಿಹಾಸ ಈ ಗೊಂಬೆ ಆಟಕ್ಕೆ ಇರಬಹುದು. ಜಗತ್ತಿನ ಬಹುತೇಕ ರಾಷ್ಟ್ರಗಳು ಈ ಗೊಂಬೆ ಆಟವನ್ನು ಆಡುತ್ತಾರೆ. ಭಾರತದಲ್ಲಿ ಬಂಗಾಳ, ಒರಿಸ್ಸಾ ರಾಜ್ಯಗಳಲ್ಲಿ ಈ ಗೊಂಬೆ ಆಟ ಹೆಚ್ಚು ಪ್ರಚಲಿತವಿದೆ. ಕರ್ನಾಟಕದಲ್ಲಿ ಈ ಆಟ ಅಷ್ಟು ಪ್ರಚಲಿತವಿಲ್ಲ. ಆದರೂ ನಾಗಮಂಗಲ ಹಾಗೂ ಶೃಂಗೇರಿ ತಾಲೂಕಿನ ದತ್ತಾತ್ರೇಯ ಅರಳೀಕಟ್ಟೆ ಎನ್ನುವವರು ಈ ಸಲಾಕೆ ಗೊಂಬೆ ಆಟಕ್ಕೆ ರಾಷ್ಟ್ರೀಯ ಮನ್ನಣೆಯನ್ನು ದೊರಕಿಸಿ ಕೊಟ್ಟಿದ್ದಾರೆ.

ಸಾಮಾನ್ಯವಾಗಿ ಸಲಾಕೆ ಗೊಂಬೆಗಳನ್ನು ಹಗುರವಾದ ಕಟ್ಟಿಗೆ ತುಂಡು, ಪೇಪರ್ ಮೆಶ್ ಹಾಗೂ ಹೊಲಿದ ಬಟ್ಟೆಯ ಉಂಡೆಯಿಂದ ಮುಖದ ವಿನ್ಯಾಸ ಮಾಡಿ ಅದಕ್ಕೆ ಒಂದು ಉದ್ದನೆಯ ಕಟ್ಟಿಗೆ ದಂಡವನ್ನು ಜೋಡಿಸಿ ಗೊಂಬೆಗಳನ್ನು ತಯಾರಿಸುತ್ತಾರೆ. ಚಲನೆಗೆ ಕೈ ಭಾಗವನ್ನೇ ಹೆಚ್ಚಾಗಿ ಬಳಸುತ್ತಾರೆ. ಅದಕ್ಕೆ ಸಪೂರಾದ ಕಬ್ಬಿಣದ ರಾಡನ್ನು ಜೋಡಿಸಿ ಕೆಳಗಿನಿಂದ ಚಲನೆ ಮಾಡುತ್ತಾ ಆಟವಾಡಿಸುವ ರೀತಿ ಸಲಾಕೆ ಗೊಂಬೆಯ ಆಟದ್ದಾಗಿದೆ. ಸಲಾಕೆ ಗೊಂಬೆಗಳಿಗೆ ಕೆಲ ಭಾಗಗಳ ನಿಖರವಾದ ಚಲನೆಗಳಿಗೆ ಸೂತ್ರವನ್ನೂ ಬಳಸುತ್ತಾರೆ. ಆ ಮೂಲಕ ದೀಪ ಹಚ್ಚುವುದು ಹಾರಹಾಕುವುದು ಇತ್ಯಾದಿ ಸೂಕ್ಷ್ಮ ಚಲನೆಗಳನ್ನು ಗೊಂಬೆ ಆಟದಲ್ಲಿ ತೋರಿಸುವ ಪ್ರಯತ್ನ ಸಲಾಕೆ ಗೊಂಬೆ ಆಟಗಾರರು ಮಾಡುತ್ತಾರೆ.

## 2.5 ಕೈಗವಸು ಹಾಗೂ ಕೈಗೊಂಬೆಯಾಟ (Glow & Hand Puppetry):

ಗೊಂಬೆ ಆಟಗಳಲ್ಲಿ ಇದೂ ಒಂದು ರಂಗ ಪ್ರಕಾರವಾಗಿದ್ದರೂ ಭಾರತೀಯ ಗೊಂಬೆ ಆಟದ ಇತಿಹಾಸದಲ್ಲಿ ಸೂತ್ರದ ಗೊಂಬೆ, ತೊಗಲು ಗೊಂಬೆ ಹಾಗೂ ಸಲಾಕೆ ಗೊಂಬೆ ಆಟದಷ್ಟು ಖ್ಯಾತಿ ಈ ಗೊಂಬೆ ಆಟಗಳಿಗಿಲ್ಲ. ಅಲ್ಲದೆ ಸೂತ್ರದ ಗೊಂಬೆ ಆಟ ಹಾಗೂ ತೊಗಲು ಗೊಂಬೆ ಆಟಗಳನ್ನು ಪಾರಂಪರಿಕ ಜನಪದ ರಂಗ ಕಲೆಗಳೆಂದು ಗುರುತಿಸುತ್ತಾರೆ. ಆದರೆ ಕೈಗವಸು ಗೊಂಬೆ ಆಟಕ್ಕೆ ಆ ಮನ್ನಣೆ ಇಲ್ಲ. ಕೇರಳ ರಾಜ್ಯದಲ್ಲಿ ಪಾರಂಪರಿಕವಾಗಿ ಪುರಾಣ ಕಥೆಗಳ ಕೈಗವಸು ಗೊಂಬೆ ಆಟ ಆಡುವ ರೂಢಿ ಇದೆ. ಈ ಗೊಂಬೆ ಆಟ ಭಾರತೀಯ ಸಂದರ್ಭದಲ್ಲಿ ಹೆಚ್ಚಾಗಿ ಆಧುನಿಕ ಬೆಳವಣಿಗೆ ಆಗಿದೆ. ಈ ಗೊಂಬೆ ಆಟ ಬಹಳ ಸರಳ ಹಾಗೂ ಕಡಿಮೆ ಖರ್ಚಿನಲ್ಲೂ ಆಡಬಹುದಾದ್ದರಿಂದ ಜಗತ್ತಿನ ಎಲ್ಲ ದೇಶಗಳಲ್ಲೂ ಈ ಗೊಂಬೆ ಆಟವನ್ನು ಆಡುತ್ತಾರೆ. ಸೂತ್ರದ ಗೊಂಬೆ ಆಟಕ್ಕೆ ಹಾಗೂ ತೊಗಲು ಗೊಂಬೆ ಆಟಕ್ಕೆ ಹೋಲಿಸಿದರೆ ಈ ಗೊಂಬೆ ಆಟದ ಪ್ರಸ್ತುತಿ ಅಷ್ಟು ಸಂಕೀರ್ಣವಲ್ಲ. ಬಹಳಷ್ಟು ಗೊಂಬೆ ಆಟದ ಆಸಕ್ತರು ಈ ಗೊಂಬೆ ಆಟವನ್ನು ತಮ್ಮದೇ ರೀತಿಯಲ್ಲಿ ಆಡುತ್ತಾರಾದರೂ ಈ ಗೊಂಬೆ ಆಟವನ್ನು ಕ್ಲಾಸಿಕ್ ಎಂದು ಪರಿಗಣಿಸುವುದಿಲ್ಲ. ಈ ಗೊಂಬೆ ಆಟದ ಸರಳ ವಿನ್ಯಾಸ, ಪ್ರಸ್ತುತಿಯಿಂದಾಗಿ ಯಾವುದೇ ವಿಷಯವನ್ನು ಬಹಳ ಕಡಿಮೆ ಕಾಲಾವಧಿಯಲ್ಲಿ ಕಲಿತು ಪ್ರದರ್ಶಿಸಬಹುದು. ಇದರ ಸರಳ ಪ್ರಸ್ತುತಿಯಿಂದಾಗಿಯೇ ಈ ಪ್ರಕಾರದಲ್ಲಿ ಹೊಸ ಹೊಸ ಪ್ರಯೋಗಗಳು ಆಗಿವೆ.



ಕೈಗೆ ಹಾಕಿಕೊಳ್ಳುವ ಗ್ಲೌಸು ಅಥವಾ ವಿವಿಧ ವಿನ್ಯಾಸದಲ್ಲಿ ಹೊಲಿದ ಬಟ್ಟೆಯಿಂದ ಮಾಡಿದ ಮುಖದ ಆಕೃತಿಯ ಮೇಲೆ ಕಥಾ ಆಕೃತಿಗಳನ್ನು ಮಾಡಿ ಕಥೆ ಹೇಳುತ್ತಾ ತಲೆ ಕೈ ಚಲನೆಯಿಂದ ಈ ಗೊಂಬೆ ಆಟವನ್ನು ಕಟ್ಟುತ್ತಾರೆ. ಪೇಪರ್ ಮೆಶ್‌ನಿಂದ ಮಾಡಿದ ಮುಖದ ವಿನ್ಯಾಸಕ್ಕೆ ಅಲಂಕಾರ ಮಾಡಿ ಈ ಗೊಂಬೆಗಳನ್ನು ಕುಣಿಸಿ ಆಡಿಸುತ್ತಾರೆ.

## 2.6 ಭಾರತೀಯ ಪಾರಂಪರಿಕ ಗೊಂಬೆ ಆಟಗಳಲ್ಲಿಯ ಕಥಾವಸ್ತು ಮತ್ತು ಕಥಾ ಪ್ರಸ್ತುತಿ

ಸೂತ್ರದ ಗೊಂಬೆ ಆಟ, ತೊಗಲು ಗೊಂಬೆ ಆಟ ಹಾಗೂ ಸಲಾಕೆ ಗೊಂಬೆ ಆಟದಲ್ಲಿ ಪಾರಂಪರಿಕವಾಗಿ ರಾಮಾಯಣ–ಮಹಾಭಾರತ, ಭಾಗವತ ಇತ್ಯಾದಿ ಪುರಾಣಗಳಿಂದಲೇ ಕಥಾವಸ್ತು ಆಯ್ಕೆ ಮಡಿಕೊಂಡು ತಮ್ಮ ಗೊಂಬೆ ಆಟದ ಕಥಾ ಹಂದರವನ್ನು ರೂಪಿಸಿಕೊಳ್ಳುವ ರೂಢಿ ಈ ಗೊಂಬೆ ಆಟಗಳು ಸ್ಪಷ್ಟ ಪ್ರದರ್ಶಕ ಕಲಾ ಪ್ರಕಾರವಾಗಿ ಬೆಳೆದಂದಿನಿಂದಲೂ ಇದೆ. ನಿರೂಪಣಾತ್ಮಕ ವಿಧಾನ, ಈ ಗೊಂಬೆ ಆಟದ ಪ್ರಧಾನ ಪ್ರಸ್ತುತಿಯ ರೀತಿ ಆಗಿದೆ. ರಾಜಸ್ಥಾನ ಸೂತ್ರದ ಗೊಂಬೆ ಆಟದಲ್ಲಿ ಜನಪದ ನಾಯಕ ಅಮರ ಸಿಂಗ ರಾಠೋಡನ ಕಥೆಯನ್ನು ಆಡುವ ರೂಢಿ ಇದೆ. ಪಾರಂಪರಿಕ ಸ್ಥಳೀಯ ಆಚರಣೆಗಳ ಹಾಗೂ ನಂಬಿಕೆಗಳಿಗೆ ನಮ್ಮ ಜನಪದ ರಂಗದ ಆಟಗಳು ಒಂದಿಲ್ಲೊಂದು ರೀತಿ ತಳುಕು ಹಾಕಿಕೊಂಡಿರುವುದರಿಂದ ಸ್ಥಳೀಯ ಶ್ರೀಮಂತರು, ಜಮೀನ್ದಾರರು, ಊರಿನ ಹಿರಿಯರು, ಊರದೇವರ ಜಾತ್ರೆ, ಹರಕೆ ಹಬ್ಬಹರಿದಿನಗಳ ಸಂಭ್ರಮ ಎಂದು ಈ ಆಟಗಳನ್ನು ಹಮ್ಮಿಕೊಳ್ಳುವ ರೂಢಿ ಮೊದಲಿನಿಂದಲೂ ಇದೆ. ಅದು ಜಮೀನ್ದಾರಿ ಪದ್ಧತಿಯ ಯುಗದವರೆಗೂ ಹಾಗೆ ಮುಂದುವರೆದುಕೊಂಡು ಬಂದಿದೆ. ಆಟವನ್ನು ಇಡೀ ರಾತ್ರಿ, ಬೆಳಗಿನವರೆಗೆ ಆಡುವ ಪದ್ಧತಿ ಇತ್ತು. ಈಗ ಕೇವಲ ಒಂದೆರಡು ತಾಸು ಮಾತ್ರ ಆಡುವ ರೂಢಿಯನ್ನು ಕಾಲಕ್ಕೆ ತಕ್ಕಂತೆ ಬದಲಾವಣೆ ಮಾಡಿಕೊಂಡಿದ್ದಾರೆ.

ಗೊಂಬೆ ಆಟಗಳ ಪ್ರದರ್ಶನದ ಪ್ರಸ್ತುತಿಯಲ್ಲಿ ಆಗ ಎದುರಿಗಿದ್ದ ಪ್ರಸಿದ್ಧ ಬಯಲಾಟಗಳ ಮಾದರಿಯನ್ನೇ ಅನುಕರಿಸಲಾಗಿದೆ. ಉದಾಹರಣೆಗೆ ಕೊಗ್ಗಾ ಕಾಮತ್ ಕುಂದಾಪುರ, ಇವರು ತಮ್ಮ ಗೊಂಬೆ ಆಟದ ಪ್ರದರ್ಶನ ಪ್ರಸ್ತುತಿಗೆ ಇವರು ಆ ಸ್ಥಳದಲ್ಲಿನ ಪ್ರಚಲಿತ ಯಕ್ಷಗಾನ ಬಯಲಾಟದ ಮಾದರಿಯನ್ನೇ ಅನುಸರಿಸುತ್ತಾರೆ. ಇನ್ನು 'ಕಿಳ್ಳಿಕ್ಯಾತರಾಟ' ಹಾಗೂ ಉತ್ತರ ಕರ್ನಾಟಕದಲ್ಲಿಯ 'ಸೂತ್ರದ ಗೊಂಬೆ' ಆಟಗಾರರು ತಮ್ಮೆದುರಿಗಿದ್ದ ಬಯಲಾಟದ ರೀತಿಯನ್ನೇ ಅನುಸರಿಸುತ್ತಾರೆ. ತೊಗಲು ಗೊಂಬೆ ಆಟದಲ್ಲಿ ನೃತ್ಯ, ಕುಣಿತ, ಮಾತುಗಾರಿಕೆ ಎಲ್ಲಾ ಬಯಲಾಟದ ಶೈಲಿಯೇ ಆಗಿರುತ್ತದೆ. ಆದರೆ ಕಥಾ ಹಂದರದಲ್ಲಿ ತಮ್ಮದೇ ಆದ ನಿರೂಪಣಾ ಶೈಲಿಯಿಂದ ಉಪಕಥೆಗಳ ಸಹಾಯದಿಂದ ಪ್ರೇಕ್ಷಕರನ್ನು ರಂಜಿಸುವ ರೀತಿ ಅನನ್ಯವಾದದ್ದು. ಸಂಗೀತದ ಮೇಳ ಈ ಗೊಂಬೆ ಆಟಗಳಲ್ಲಿ ಕಾಣುವ ಸಾಮಾನ್ಯ ಗುಣವಾಗಿದೆ. ಕೆಲವು ಗೊಂಬೆ ಆಟಗಳಲ್ಲಿ ವಾದ್ಯ–ಸಂಗೀತ ಮೇಳದವರು ಗೊಂಬೆ ಮನೆಯ ಒಳಗೇ ಇರುತ್ತಾರೆ, ಕೆಲ ತಂಡಗಳಲ್ಲಿ ಇವರು ಗೊಂಬೆ ಮನೆಯ ಹೊರಗೆ ಕುಳಿತುಕೊಳ್ಳುವುದುಂಟು. ಸೂತ್ರದಾರ, ಕಿಳ್ಳೆಕ್ಯಾತ, ಬಂಗಾರಕ್ಕ, ವಿದೂಷಕ ಮುಂತಾದ ಪಾತ್ರಗಳು ಜನರಿಗೆ ಬೇಕಾದ ಕಾಮಿಕ್ ರಿಲೀಫ್ ಕೊಡುತ್ತಾ ರಂಜನೆ ಒದಗಿಸುತ್ತವೆ. ವರ್ತಮಾನದ ಪ್ರಸ್ತುತತೆಯನ್ನು ಒಟ್ಟು ಆಟಕ್ಕೆ ತಂದು ಕೊಡುವವರೇ ಈ ಹಾಸ್ಯಪಾತ್ರಗಳು.

## 2.7 ಭಾರತೀಯ ಗೊಂಬೆ ಆಟಗಳಲ್ಲಿ ಆಧುನಿಕತೆ

ಬ್ರಿಟಿಷರ ಆಡಳಿತದಿಂದೀಚೆಗೆ ನಮ್ಮ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಹಾಗೂ ಶೈಕ್ಷಣಿಕ ಜೀವನದಲ್ಲಿ ಅವರ ಪ್ರಭಾವದಿಂದ ಆಧುನಿಕತೆ ಪ್ರವೇಶಿಸಿ ಹಲವಾರು ಬದಲಾವಣೆ ಆದಂತೆ ಗೊಂಬೆ ಆಟದಲ್ಲೂ ಹಲವಾರು ಬದಲಾವಣೆಗಳು ಆರಂಭವಾದವು. ಸೂತ್ರದ ಗೊಂಬೆ ಆಟ ಹಾಗೂ ಸಲಾಕೆ, ಕೈಗವಸು ಗೊಂಬೆ ಆಟದಲ್ಲಿ ಬೇಗನೆ ಆಧುನಿಕತೆ ಪ್ರವೇಶಿಸಿತು. ಅಂದರೆ ಪುರಾಣಗಳ ವಸ್ತುಗಳ ಆಯ್ಕೆ ಮಾಡಿಕೊಂಡು ಪ್ರದರ್ಶಿಸುವ ರೂಢಿ ಪ್ರಾರಂಭವಾಯಿತು. ರಾತ್ರಿಯಿಂದ ಬೆಳಗಿನವರೆಗೆ ಆಟವನ್ನು ನೋಡುವ ರೂಢಿ ಹೋಗಿ ಕಾಲಕ್ಕೆ ತಕ್ಕಂತೆ ಹತ್ತರಿಂದ ಹದಿನೈದು ನಿಮಿಷದಿಂದ ಹಿಡಿದು ಒಂದೆರಡು ತಾಸು ಮಾತ್ರ ಆಟ ಆಡುವ ರೂಢಿ ಬಂತು. ತಾಂತ್ರಿಕವಾಗಿ ಅಂದರೆ ಬೆಳಕಿನ ಉಪಕರಣಗಳ ಬಳಕೆ ರಂಗವಿನ್ಯಾಸ ಇತ್ಯಾದಿ ಅಂಶಗಳಲ್ಲಿ ಸಂಗೀತೋಪಕರಣಗಳ ಬಳಕೆಯಲ್ಲೂ ಹೊಸತನ ಪ್ರವೇಶಿಸಿತು. ಮೊದಮೊದಲು ತಾಳ, ಮದ್ದಲೆ, ಖಂಜರ, ಢೋಲಕ್, ತಬಲಾ ಬಳಕೆಯಾಗುತ್ತಿದ್ದು, ಈಗ ರಿದಂಪ್ಯಾಡ್, ಕ್ಯಾಶಿಯೋ ಇತ್ಯಾದಿ (Electronic) ಸಂಗೀತೋಪಕರಣಗಳು ಬಳಕೆಯಾಗುತ್ತಿವೆ. ಗೊಂಬೆ ಆಟದಂತಹ ರಂಗ ಪ್ರಕಾರಗಳು ಈ ಆಧುನಿಕತೆಯ ಪ್ರವೇಶದಿಂದ ಮುಖ್ಯ ಮನರಂಜನಾ ವಾಹಿನಿಯಿಂದ ದೂರ ಸರಿಯುವ ಹಂತಕ್ಕೂ ತಲುಪಿದವು. ಹೀಗಾಗಿ ಸರ್ಕಾರದ ಸ್ವಾಯತ್ತ ಸಂಸ್ಥೆಯಾದ ಸಂಗೀತ ನಾಟಕ ಅಕಾಡೆಮಿಯಿಂದ ಹಿಡಿದು (ಮುಖ್ಯವಾಗಿ ನೆನಪಿಸಬೇಕಾದ ವ್ಯಕ್ತಿ ಕಮಲಾದೇವಿ ಚಟ್ಟೋಪಾಧ್ಯ) ಕೆಲ ಉತ್ಸಾಹಿ ತಂಡದವರೂ, ಕಲಾವಿದರೂ ಮತ್ತೆ ಗೊಂಬೆ ಆಟಕ್ಕೆ ಆಧುನಿಕ ಸ್ಪರ್ಶ ನೀಡುವುದರ ಜೊತೆಗೆ, ಪಾರಂಪರಿಕ ಗೊಂಬೆ ಆಟವನ್ನು ಸಂಗೋಪಿಸಿಕೊಳ್ಳುವ ಆಸಕ್ತಿ ತೋರಿಸಿದರು. ಹೀಗಾಗಿ ಮತ್ತೆ ಗೊಂಬೆ ಆಟಕ್ಕೆ ಭಾರತದಲ್ಲಿ ಹೊಸ ಜೀವ ಬಂತು.



ಆಧುನಿಕ ತೊಗಲುಗೊಂಬೆ

ಸಾಮಾನ್ಯವಾಗಿ ಪಾರಂಪರಿಕ ಗೊಂಬೆ ಆಟವು ತಂದೆಯಿಂದ ಮಗನಿಗೊ ಅಥವಾ ಅವರ ವಂಶದಲ್ಲಿ ಯಾರಾದರೂ ಪಾರಂಪರಿಕವಾಗಿ ಆಟ ಆಡಿ ಆ ಕಲಾ ಪ್ರಕಾರವನ್ನೂ ಉಳಿಸಿಕೊಂಡು ಹೋಗುವ ರೂಢಿ ಇತ್ತು. ಆದರೆ ಗೊಂಬೆ ಆಟದಂತಹ ರಂಗ ಪ್ರಕಾರವೂ ಹೆಚ್ಚು ಹೆಚ್ಚು ಸೆಕ್ಯೂಲರ್ ಆಗುತ್ತಾ ಹೋದಂತೆ ಆಸಕ್ತಿ ಉಳ್ಳವರು ಯಾರು ಬೇಕಾದರೂ ಈ ಆಟವನ್ನು ಅನುಸಂಧಾನ ಮಾಡುವ ಸ್ಥಿತಿ ಆಧುನಿಕ ಯುಗದಲ್ಲಿ ನಿರ್ಮಾಣವಾಗಿದೆ.

ಹೀಗೆ ಭಾರತೀಯ ಗೊಂಬೆ ಆಟದಲ್ಲಿ ಆಧುನಿಕತೆಯ ಪ್ರವೇಶದಿಂದಾಗಿ ನಿಧಾನವಾಗಿ ಪೌರಾಣಿಕ ಕಥೆಗಳು ಕಡಿಮೆಯಾಗುತ್ತಾ 'ಝಾಂಸಿಕಿರಾಣಿ', 'ಶಿವಾಜಿ' ಮುಂತಾದ ಚಾರಿತ್ರಿಕ ವ್ಯಕ್ತಿಗಳ ಕಥೇಗಳನ್ನು 'ಪಂಚತಂತ್ರ' ಹಾಗೂ 'ದಿ ಲಿಟಲ್ ಪಿಗ್ಸ್', 'ದ ಥ್ರಿ ಬಿಯರ್' ಮುಂತಾದ ಮಕ್ಕಳ ಕಥೆಗಳನ್ನು ಗೊಂಬೆ ಆಟಕ್ಕೆ ಅಳವಡಿಸಿ ಪ್ರದರ್ಶಿಸಲಾಯಿತು. ದರ್ಪಣಾ ಅಕಾಡೆಮಿ ಅಹಮದಾಬಾದ, ದಾದಿ ಪದಮಜಿ ನ್ಯೂಡೆಲ್ಲಿ, ರತ್ನಮಾಲ ನೂರಿ, ಮೀರಾ ನಾಯಕ್, ಡಾ. ಪ್ರಕಾಶ ಗರುಡ ಮುಂತಾದ ಸಂಸ್ಥೆ, ವ್ಯಕ್ತಿಗಳು ಭಾರತೀಯ ಗೊಂಬೆ ಆಟದಲ್ಲಿ ಆಧುನಿಕ ಪ್ರಯೋಗಗಳನ್ನು ಮಾಡಿದರು. International Union of Marionettes(UNIMA) ಎಂಬ ಸಂಸ್ಥೆ ಪರುಗ್ವೆದಲ್ಲಿ ದ್ವಿತೀಯ ಜಾಗತಿಕ ಮಹಾಯುದ್ಧದ ನಂತರ ಸ್ಥಾಪಿತವಾಗಿ ಜಗತ್ತಿನ ಎಲ್ಲ ಗೊಂಬೆ ಆಟಗಾರರು ಅದರ ಸದಸ್ಯತ್ವ ಪಡೆದು ಗೊಂಬೆಗಳ ಪ್ರದರ್ಶನ ಚರ್ಚೆ ಚಿಂತನೆ ಮಾಡಲು ಒಂದು ವೇದಿಕೆ ನಿರ್ಮಾಣ ಮಾಡಿಕೊಟ್ಟಿತು. ಈ ಸಂಸ್ಥೆಯ ಸದಸ್ಯರು ಜಾಗತಿಕ ಶಾಂತಿಗಾಗಿ ಕಲೆಯ ಮುಖಾಂತರ ಸೇವೆ ಮಾಡುವ ಉದಾತ್ತ ಗುರಿಯನ್ನು ಇಟ್ಟುಕೊಂಡಿದ್ದಾರೆ.



## 2.8 ಕರ್ನಾಟಕದಲ್ಲಿ ಗೊಂಬೆ ಆಟ

ಕರ್ನಾಟಕದಲ್ಲಿ ಗೊಂಬೆ ಆಟ 15–16ನೆಯ ಶತಮಾನದಲ್ಲೇ ಪ್ರಚಲಿತವಾಗಿರಬಹುದು. 15 ಶತಮಾನದ ಭಕ್ತಿ ಪರಂಪರೆಯ ಕವಿ ಕನಕದಾಸರ ಒಂದು ಪದ್ಯ "ಗೊಂಬೆಯಾಟವಯ್ಯಾ ಆ ದೇವನಾಡುವ ಗೊಂಬೆ ಆಟವಯ್ಯಾ" ಎಂದು ಪ್ರಾರಂಭವಾಗುತ್ತದೆ. ಕರಾವಳಿ ಪ್ರದೇಶವನ್ನು ಬಿಟ್ಟರೆ ಕರ್ನಾಟಕದ ಬಹಳಷ್ಟು ಪ್ರದೇಶಗಳಲ್ಲಿ ತೊಗಲು ಗೊಂಬೆ ಆಟವು ಪ್ರಚಲಿತವಿದೆ. ಕರಾವಳಿ ಪ್ರದೇಶ ಹಾಗೂ ಮೈಸುರು ಪ್ರಾಂತದ ಕೆಲ ಪ್ರದೇಶಗಳಲ್ಲಿ ಮತ್ತು ರಾಣೆಬೆನ್ನೂರು ತಾಲೂಕುಗಳಲ್ಲಿ ಸೂತ್ರದ ಗೊಂಬೆ ಆಟವನ್ನು ಆಡುವ ತಂಡಗಳಿವೆ. ಕರ್ನಾಟಕದಲ್ಲಿ ತೊಗಲು ಗೊಂಬೆ ಆಟಗಾರರನ್ನು ಕಿಳ್ಳಿಕ್ಯಾತ, ಶಿಳ್ಳೇಕ್ಯಾತ, ಗೊಂಬೆ ರಾಮರು ಎಂದು ಕರೆಯುತ್ತಾರೆ. ಇವರೆಲ್ಲಾ ಮಹಾರಾಷ್ಟ್ರದ ಅಲೆಮಾರಿ ಜನಾಂಗದವರಾಗಿದ್ದು ಕರ್ನಾಟಕದಾದ್ಯಂತ ಹರಡಿದ್ದಾರೆ. ಇವರಾಡುವ ಭಾಷೆ ಮರಾಠಿ.

ಭಾರತದ ಇತರ ಪ್ರದೇಶಗಳಲ್ಲಿ ಆದಂತೆ ಕರ್ನಾಟಕವು ಆಧುನಿಕ ಸಂದರ್ಭದಲ್ಲಿ ಇತರ ಮನರಂಜನಾ ಮಾಧ್ಯಮಗಳಿಗೆ ಹೋಲಿಸಿದರೆ ಗೊಂಬೆ ಆಟವೂ ಅಂಚಿಗೆ ಸರಿಸಲ್ಪಟ್ಟದ್ದು, ಗೊಂಬೆ ಆಟ ಆಡುವ ತಂಡಗಳು ನಿಧಾನವಾಗಿ ಕಣ್ಮರೆಯಾಗುತ್ತಿವೆ. ಬೆಳಗಲ್ ವೀರಣ್ಣ, ಯಡ್ರಾಮನಹಳ್ಳಿ ದೊಡ್ಡ ಬರಮಪ್ಪಾ, ಬೆಳ್ಳೂರ ರಾಮಪ್ಪ (ತೊಗಲು ಗೊಂಬೆ ಆಟ), ಕೊಗ್ಗ ಕಾಮತ್ ಕುಂದಾಪುರ, ಗೊಂಬಿಗೌಡರು ರಾಣೆಬೆನ್ನೂರು ತಾಲೂಕು, (ಸೂತ್ರದ ಗೊಂಬೆಯಾಟ), ಶ್ರೀ ದತ್ತಾತ್ರೇಯ ಶೃಂಗೇರಿ, ಶ್ರೀ ಭಾವನೇಶ್ವರಿ ಸೂತ್ರದ ಗೊಂಬೆ ಮೇಳ ಮಂಡ್ಯ ಜಿಲ್ಲೆ, ಬಿ.ಪುಟ್ಟಶಾಮಾಚಾರ (ಸಲಾಕೆ ಗೊಂಬೆ ಆಟ) ಹೀಗೆ ಮುಂತಾದವರು ಗೊಂಬೆ ಆಟದ ಪರಂಪರೆಯನ್ನು ಉಳಿಸಿಕೊಂಡಿದ್ದಾರೆ. ಆದರೆ ಆಧುನಿಕ ಕಲಾ ಪ್ರಕಾರವಾಗಿ ಈ ಮಾಧ್ಯಮಗಳಲ್ಲಿ ಇವರು ಪ್ರಯೋಗಗಳನ್ನು ಮಾಡಿಲ್ಲ. ಇನ್ನು ಕೈಗವಸು ಗೊಂಬೆ ಆಟವನ್ನು ಮುಖ್ಯ ವೃತ್ತಿಯಾಗಿ ಕೈಕೊಂಡು ಜೀವನವನ್ನು ನಡೆಸುವ ಕಲಾ ತಂಡಗಳು ಇಲ್ಲವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಕಡಿಮೆ. ಆದರೆ ಕೈಗವಸು ಗೊಂಬೆಗಳ ಬಳಕೆ ಕಲಾತ್ಮಕ ಆಟಕ್ಕಲ್ಲದೆ ಶೈಕ್ಷಣಿಕ ಕ್ಷೇತ್ರದಲ್ಲಿ ಸಾಮಾಜಿಕ ಅರಿವೂ ಮೂಡಿಸಲು ಪ್ರಚಾರ ಮಾಧ್ಯಮಕ್ಕಾಗಿಯೂ ಹೀಗೆ ಬೇರೆ ಬೇರೆ ಕಾರಣಕ್ಕಾಗಿ ಉದ್ದೇಶಗಳಿಗೆ ಬಳಸಿಕೊಳ್ಳುವ ರೂಢಿ ಇದೆ.



ನಶಿಸಿ ಹೋಗುತ್ತಿರುವ ಗೊಂಬೆ ಆಟವನ್ನು ಬೇರೆ ಬೇರೆ ರೀತಿಯಲ್ಲಿ ಬಳಸಿ ಉಳಿಸಿಕೊಳ್ಳುವ ಪ್ರಯತ್ನಗಳು ಕರ್ನಾಟಕದಲ್ಲಿ ಇತ್ತೀಚೆಗೆ ನಡೆದಿದೆ. ಚಿತ್ರಕಲಾ ಪರಿಷತ್ ಬೆಂಗಳೂರು ಇಲ್ಲಿ ಕರ್ನಾಟಕದ ತೊಗಲು ಗೊಂಬೆಗಳ ಸಂಗ್ರಹವನ್ನು ಶ್ರೀ ನಂಜುಂಡರಾವ್ ಇವರು ಮಾಡಿದ್ದಾರೆ. ಹಾಗೆ ರಿಜಿನಲ್ ರಿಸೋರ್ಸ್ ಸೆಂಟರ್ ಉಡುಪಿ ಇಲ್ಲಿ ಗೊಂಬೆ ಆಟದ ಆಡಿಯೋ, ವಿಡಿಯೋ ದಾಖಲೆ ಮಾಡಿದ್ದಾರೆ. ಹಾಗೆ ಅಲ್ಲಿಯ ಸಂಶೋಧಕರಾದ ಎಸ್.ಎ.ಕೃಷ್ಣಯ್ಯಾ ಇವರು Karnataka Puppetry ಎಂಬ ಉಪಯುಕ್ತ ಪುಸ್ತಕವನ್ನು ಗೊಂಬೆ ಆಟ ಕುರಿತಾಗಿ ಬರೆದಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯವರು ಉಪಸಂಸ್ಕೃತಿ ಅಧ್ಯಯನ ಮಾಲಿಕೆಯಲ್ಲಿ ಶ್ರೀ ಗೋವಿಂದರಾಜ ಇವರು 'ಗೊಂಬೆರಾಮರು' ಎಂಬ ಪುಸ್ತಕವು ತೊಗಲು ಗೊಂಬೆ ಆಟಗಾರರ ಜನಾಂಗೀಯ ಚರಿತ್ರೆಯ ಅಧ್ಯಯನಕ್ಕೆ ಮೀಸಲಾದ ಪುಸ್ತಕವಾಗಿದೆ. ಶ್ರೀ ನಂಜುಂಡರಾವ ಇವರು ಕರ್ನಾಟಕ ತೊಗಲು ಬೊಂಬೆಗಳ ಮಾಹಿತಿಯ ಒಂದು ಪುಸ್ತಕ ಬರೆದಿದ್ದಾರೆ. ವಿಶ್ವವಿದ್ಯಾಲಯಗಳ ಜನಪದ ಅಧ್ಯಯನ ವಿಭಾಗದ ವಸ್ತು ಸಂಗ್ರಹಾಲಯಗಳಲ್ಲಿ ಪಾರಂಪರಿಕ ತೊಗಲು ಗೊಂಬೆಗಳ ಹಾಗೂ ಸೂತ್ರದ ಗೊಂಬೆಗಳ ಸಂಗ್ರಹವಿದೆ. ಕೆಲ ಸಣ್ಣ ಪುಟ್ಟ ಪ್ರಯತ್ನಗಳನ್ನು ಬಿಟ್ಟರೆ, ಈ ಕಲಾ ಪ್ರಕಾರವನ್ನು ಮುಖ್ಯವಾಹಿನಿಯ ರಂಗಕಲಾಪ್ರಕಾರವಾಗಿ ಬೆಳೆಸುವ ಪ್ರಯತ್ನಗಳು ಕರ್ನಾಟಕದಲ್ಲಿ ತೀರಾ ಕಡಿಮೆ ಎಂದು ಹೇಳಬಹುದು.

ಕರ್ನಾಟಕದಲ್ಲಿ ವೃತ್ತಿಪರವಾಗಿ ಜನಪದ ಗೊಂಬೆ ಆಟಗಳ ತಂಡದಂತೆ ಗೊಂಬೆಯಾಟದ ಮಾಧ್ಯಮದಲ್ಲಿ ಆಧುನಿಕತೆ ತಂಡಗಳು ವ್ಯಕ್ತಿಗಳು ಕೆಲಸ ಮಾಡುತ್ತಿರುವುದು ತೀರಾ ಕಡಿಮೆ. ಧಾರವಾಡದ ಗೊಂಬೆ ಮನೆ ಈ ನಿಟ್ಟಿನಲ್ಲಿ ಕರ್ನಾಟಕದ ಪಾರಂಪರಿಕವಾದ ತೊಗಲು ಗೊಂಬೆ ಆಟವನ್ನು ಹೊಸ ರೀತಿಯಲ್ಲಿ ಪ್ರಸ್ತುತಿಪಡಿಸಿ ಒಂದು ವೃತ್ತಿಪರ ತಂಡವನ್ನು ಕಟ್ಟಿದ್ದಾರೆ. ಅವರು 'ಗಾರ್ಧಪ ಮನುಷ್ಯ ಪ್ರಹಸನ', 'ಕೆಂಪು ಹೂ', 'ಹಕ್ಕಿ ಹಾಡು' ಇತ್ಯಾದಿ ಕಥೇಗಳ ನೂರಾರು ಪ್ರದರ್ಶನಗಳನ್ನು ದೇಶದಾದ್ಯಂತ ಕೊಟ್ಟಿದ್ದಾರೆ. ತೊಗಲು ಗೊಂಬೆ ಆಟ ಕುರಿತು ಮಕ್ಕಳಿಗಾಗಿ ಹಾಗೂ ದೊಡ್ಡವರಿಗಾಗಿ ಕಾರ್ಯಾಗಾರವನ್ನು ನಡೆಸಿಕೊಟ್ಟಿದ್ದಾರೆ. ಪಾರಂಪರಿಕ ತೊಗಲು ಗೊಂಬೆ ಆಟಗಾರ ಬೆಳಗಲ್ ವೀರಣ್ಣನವರು ಪೌರಾಣಿಕ ಕಥೆ ಬದಲಾಗಿ 12ನೇ ಶತಮಾನದ ಕ್ರಾಂತಿ ಪುರುಷ ಬಸವೇಶ್ವರ ಚರಿತ್ರೆ ಹಾಗೂ ಸ್ವಾತಂತ್ರ ಸಂಗ್ರಾಮದ ಕಥೆಗಳನ್ನು ಹೊಸ ರೀತಿಯಲ್ಲಿ ಪ್ರದರ್ಶಿಸಿದ್ದಾರೆ

## 2.9. ಜಗತ್ತಿನ ಕೆಲ ವಿಶಿಷ್ಟ ಗೊಂಬೆಯಾಟಗಳು

### ಜಪಾನಿನ ಬುನ್ರಾಕು:

ಜಪಾನ ದೇಶದ ಪಾರಂಪರಿಕ ಗೊಂಬೆಯಾಟವೆ ಬುನ್ರಾಕು. ಒಬ್ಬ ನಿರೂಪಕ, ಜೊತೆಗೆ ವಾದ್ಯಮೇಳ ಮತ್ತು ಪಕ್ಕಾ ತರಬೇತಿ ಹೊಂದಿದ ಮೂರು ಜನ ಗೊಂಬೆ ಆಡಿಸುವವರಿಂದ ಅಭಿನೀತಗೊಳ್ಳುವ ವಿಶಿಷ್ಟ ಬುನ್ರಾಕು. ಈ ಆಟ ಕೂಡ ಆ ದೇಶದ ಮಧ್ಯಯುಗದ ಕಾಲದಲ್ಲಿ ಪ್ರಚಲಿತಗೊಂಡಿತು. ಬುನ್ರಾಕು ಗೊಂಬೆಗಳು ಸುಮಾರು 3ರಿಂದ 5 ಅಡಿ ಎತ್ತರದವರೆಗೂ ಇರುತ್ತವೆ. ತಲೆ, ಸೊಂಟ, ಕಾಲು, ಎದೆ ಭಾಗಗಳನ್ನು ವಿಶಿಷ್ಟ ರೀತಿಯಲ್ಲಿ ವಿನ್ಯಾಸಗೊಳಿಸಲಾಗಿದ್ದು ಅವುಗಳ ಆಕೃತಿ ಜಪಾನಿನ 'ನೊ' ಮತ್ತು 'ಕಬುಕಿ' ಜನಪದ ಆಟದ ಪಾತ್ರಗಳ ಆಕೃತಿಗಳಿಗೆ ಹತ್ತಿರವಾಗಿರುತ್ತವೆ. ಮೂರು ಜನ ಗೊಂಬೆ ಆಡಿಸುವವರಲ್ಲಿ ಮುಖ್ಯ ಗೊಂಬೆ ಆಡಿಸುವವನ ಜೊತೆಗೆ, ಇನ್ನಿಬ್ಬರು ಗೊಂಬೆ ಆಡಿಸುವವರು ಇರುತ್ತಾರೆ. ಸಾಮಾನ್ಯವಾಗಿ ಇವರು ಗೊಂಬೆ ಆಡಿಸುವಾಗ ರಂಗದ ಮೇಲೆ ಇರುತ್ತಾರೆ. ಆದರೆ ಕಪ್ಪು ಬಟ್ಟೆ ತೊಟ್ಟಿರುತ್ತಾರೆ.



ಜಪಾನಿನ ಬುನ್ರಾಕು ಗೊಂಬೆಯಾಟದ ಒಂದು ಮಾದರಿ

### ವಿಯಟ್ನಾಮ್ ದೇಶದ ನೀರು ಗೊಂಬೆಯಾಟ:

ಹೆಸರೇ ಸೂಚಿಸುವಂತೆ ಇದೊಂದು ವಿಶಿಷ್ಟ ರೀತಿಯ ಗೊಂಬೆಯಾಟ. ನೀರಿನ ಪಾತಳಿಯೆ ಈ ಗೊಂಬೆ ಆಟಕ್ಕೆ ವೇದಿಕೆ. ಒಂದು ಕೊಳದ ಸುತ್ತ ಮುತ್ತ ಪ್ರೇಕ್ಷಕರು ಕುಳಿತಿದ್ದು, ಆ ಕೊಳದಲ್ಲಿ ಒಂದು ತೆಪ್ಪದಲ್ಲಿ ಈ ಗೊಂಬೆಗಳನ್ನು ಆಡಿಸುವ ರೀತಿಯೇ ವಿಶಿಷ್ಟವಾದದ್ದು. ಬೇರೆ ರೀತಿಯ ಗೊಂಬೆ ಆಟಕ್ಕೆ ಹೋಲಿಸಿದರೆ ಈ ಗೊಂಬೆ ಆಟ ಸಂಕೀರ್ಣವಾದದ್ದು. ಸುಮಾರು 8 ವರ್ಷದ ಮಗುವಿನ ಆಳ ಎತ್ತರದ ಗೊಂಬೆಗಳನ್ನು ಉದ್ದನ್ನೇ ಬೊಂಬುಗಳದಿಂದ ಗೊಂಬೆಗಳನ್ನು ಆಡಿಸುತ್ತಾರೆ.



ನೀರು ಗೊಂಬೆಯಾಟದ ಒಂದು ಮಾದರಿ

## 2.10 ಗೊಂಬೆಯಾಟದ ಸೌಂದರ್ಯ ಮೀಮಾಂಸೆಯ ಸ್ಥೂಲ ನೋಟ (Aesthetics of Puppetry or Dramaturgy of Puppetry)

ಗೊಂಬೆ ಆಟದಲ್ಲಿ ಗೊಂಬೆಗಳ ತಯಾರಿಕೆ ಒಂದು ಹಂತದ ಕಲಾತ್ಮಕ ಕ್ರಿಯೆ ಆದರೆ ಹಾಗೆ ತಯಾರಾದ ಗೊಂಬೆಗಳು ಪಾತ್ರಗಳಾಗಿ ಪ್ರೇಕ್ಷಕರ ಎದುರಿಗೆ ನಟಿಸುವಂತೆ ಮಾಡಿ ಪ್ರದರ್ಶನ ಕಟ್ಟುವ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಗೊಂಬೆ ಆಟದ ಸೌಂದರ್ಯ ಮೀಮಾಂಸೆಯನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ.

ಕಾಣದ ಕೈಯೊಂದು ಗೊಂಬೆ ಆಡಿಸುತ್ತಾ ಅದಕ್ಕೆ ಜೀವ ತುಂಬುತ್ತಿರುತ್ತದೆ. ಆ ಕೈಗೊಂಬೆ ರಾಮನದು, ಗೊಂಬೆ ನಟನದು. ಗೊಂಬೆಗಳು ಮಾತನಾಡುತ್ತವೆ. ಅದಕ್ಕೆ ಧ್ವನಿ ಕೊಡುವವ ಗೊಂಬೆ ಆಟಗಾರ. ಗೊಂಬೆ ಆಟದಲ್ಲಿ ಸನ್ನಿವೇಷಗಳು ಸೃಷ್ಠಿಯಾಗುವಲ್ಲಿ ಹೆಚ್ಚಾಗಿ ವಾಸ್ತವದ ನೆಲೆಯೂ ಗೌಣವಾಗಿ ರಮ್ಯತೆ ಮತ್ತು ಶೈಲಿಕೃತವಾದ ಒಂದು ವಿಚಿತ್ರ ಫ್ಯಾಂಟಸಿ ಲೋಕವು ಸೃಷ್ಠಿಯಾಗುತ್ತಿರುತ್ತದೆ. ಗೊಂಬೆ ಆಟದಲ್ಲಿ ಕೇವಲ ಮನುಷ್ಯ, ಪ್ರಾಣಿ, ಪಕ್ಷಿ ಅಥವಾ ಇನ್ನಿತರ ಜೀವಿಗಳು ನಾಟಕೀಯ ಸನ್ನಿವೇಷ ಕಟ್ಟಿಕೊಡಲು ಮಾತ್ರ ಸೀಮಿತವಾಗಿಲ್ಲ. ಬದಲಾಗಿ ನಿರ್ಜೀವ ವಸ್ತುಗಳನ್ನೂ ಅಲ್ಲಿ ಮಾತನಾಡಿಸುತ್ತಾ ಆಟ ಕಟ್ಟಬಹುದು. ಉದಾ. ಅಲ್ಲಿ ಒಂದು ಮರ, ಕುರ್ಚಿ, ಟೆಲಿಫೋನ್, ಫ್ಯಾನ್ ರೈಲುಗಾಡಿಯಂತಹ ವಸ್ತುಗಳು ಗೊಂಬೆ ಪಾತ್ರವಾಗಿ ಬಂದು ಮಾತನಾಡುತ್ತ ಕಥೆ ಕಟ್ಟಬಹುದು. ಇತರ ಆಟಗಳಲ್ಲಿ ಮನುಷ್ಯನೆ ಅಂಥ ನಿರ್ಜೀವ ವಸ್ತುಗಳ ವೇಷ ಭೂಷಣ ಹಾಕಿಕೊಂಡು ಪಾತ್ರವಾದರೆ ಇಲ್ಲಿ ನೇರವಾಗಿ ಆ ನಿರ್ಜೀವ ವಸ್ತುಗಳನ್ನೇ ಪಾತ್ರ ಮಾಡಿ ಗೊಂಬೆ ಆಟಗಾರ ತನ್ನ ಧ್ವನಿ ಹಾಗೂ ಚಲನೆಗಳಿಂದ ಆ ವಸ್ತುಗಳಿಗೆ ಜೀವ ತುಂಬುತ್ತಾನೆ.



ಗೊಂಬೆಗಳೊಂದಿಗೆ ಮಕ್ಕಳು

ಜೀವಂತ ನಟರ ರಂಗಭೂಮಿಯ ಪಾತ್ರಗಳಿಗೆ ಒಂದು ಕಥಾ ಹಂದರದ ಪಾತ್ರಗಳ ಸ್ಥಾಯಿ ಭಾವವಿದ್ದೂ ಬೇರೆ ಬೇರೆ ಸನ್ನಿವೇಷಗಳಲ್ಲಿ ಸಂಚಾರಿ ಭಾವಗಳನ್ನು ಅಭಿವ್ಯಕ್ತಿಸುವ ಒಂದು ಅನುಕೂಲ ಅಥವಾ ಮಾಧ್ಯಮದ ವ್ಯಾಪ್ತಿ ಜೀವಂತ ನಟರ ರಂಗಭೂಮಿಗೆ ಇರುತ್ತದೆ. ಆದರೆ ಗೊಂಬೆ ಆಟಗಳಿಗೆ ಪಾತ್ರಗಳ ಸ್ಥಾಯಿ ಭಾವವನ್ನು ಮಾತ್ರ ಅಭಿವ್ಯಕ್ತಿಸಲು ಅವಕಾಶವಿದೆ. ಅಲ್ಲಿ ಒಂದು ಪಾತ್ರಕ್ಕೆ ಸಿಟ್ಟು ಬಂದರೆ ಆ ಸಿಟ್ಟಿನ ಮುಖವುಳ್ಳ ಗೊಂಬೆಯನ್ನು ಮಾತ್ರ ವಿನ್ಯಾಸ ಮಾಡಿ ತೋರಿಸಬೇಕಾಗುತ್ತದೆ. ಅದೇ ಪಾತ್ರದ ಸಂಚಾರಿ ಭಾವ ಅಭಿವ್ಯಕ್ತಿಸಬೇಕಾದರೆ ಅದಕ್ಕೆ ಆ ಪಾತ್ರದ ಬೇರೆ ಗೊಂಬೆಗಳನ್ನೇ ವಿನ್ಯಾಸಗೊಳಿಸಿ ತೋರಿಸಬೇಕಾಗುತ್ತದೆ. ಇಲ್ಲವಾದರೆ ಗೊಂಬೆ ಆಟಗಾರ ತನ್ನ ಧ್ವನಿಯ ಏರಿಳಿತದ ಮೂಲಕ ಸಂಚಾರಿ ಭಾವಗಳನ್ನು ಅಭಿವ್ಯಕ್ತಿಸಬೇಕಾಗುತ್ತದೆ. ಹೀಗಾಗಿ ಗೊಂಬೆ ಆಟದಲ್ಲಿ ಸಿದ್ಧ ಪಾತ್ರಗಳ ಗೊಂಬೆಗಳ ವಿನ್ಯಾಸವನ್ನು ಅದರ ಏನೆಲ್ಲಾ ಕಲಾತ್ಮಕ ಸಾಧ್ಯತೆಗಳಿಂದ ಪ್ರದರ್ಶನ ಪೂರ್ವದಲ್ಲೇ ವಿನ್ಯಾಸಗೊಳಿಸಿಕೊಳ್ಳಬಹುದಾದ ಅನುಕೂಲವಿರುತ್ತದೆ. ಉದಾ: ಒಂದು ಜಿಪುಣ ವ್ಯಾಪಾರಿ, ಕೆಟ್ಟ ಅಧಿಕಾರಿ, ಲಂಚಗೂಳಿ ಪೋಲೀಸ್ ಅಧಿಕಾರಿ, ರಾಕ್ಷಸ, ಸಿಡುಕಿನ ಹೆಂಗಸು ಇತ್ಯಾದಿ ಪಾತ್ರಗಳನ್ನು ಜೀವಂತ ನಟರ ರಂಗಭೂಮಿಯಲ್ಲಿ ಪ್ರದರ್ಶನದ ಆ ಕ್ಷಣದಲ್ಲಿ ಪಾತ್ರಧಾರಿ ತನ್ನ ಪ್ರತಿಭೆಯಿಂದ ಪ್ರೇಕ್ಷಕರಿಗೆ ತಲುಪಿಸಬೇಕಾಗಿದ್ದು, ಗೊಂಬೆ ಆಟದಲ್ಲಿ ಅಂಥಾ ಪಾತ್ರಗಳ ಸಿದ್ಧ ಮಾದರಿಗಳನ್ನು ಪ್ರದರ್ಶನಕ್ಕೆ ಮೊದಲೆ ಗೊಂಬೆ ವಿನ್ಯಾಸಕಾರ ಸಿದ್ಧಪಡಿಸಿಕೊಳ್ಳಬಹುದಾದ ಒಂದು ಅನುಕೂಲ ಗೊಂಬೆ ಆಟಕ್ಕೆ ಇರುತ್ತದೆ. ಹಾಗೆ ಹತ್ತಾರು ಪಾತ್ರಗಳನ್ನು ಒಬ್ಬನೇ ಗೊಂಬೆ ಆಟದ ನಟ ನಿರ್ವಹಿಸಬಹುದು. ಈ ಅನುಕೂಲ ಜೀವಂತ ನಟರ ರಂಗಭೂಮಿಗೆ ಕಡಿಮೆ. ಈ ಎಲ್ಲ ತಾಂತ್ರಿಕ ಕಾರಣದಿಂದಾಗಿ ಗೊಂಬೆ ಆಟ ಒಂದು ಫಾರ್ಮ ಆಗಿ ಪ್ರತ್ಯೇಕವಾಗಿ ನಿಲ್ಲುತ್ತದೆ.

ನಟರ ರಂಗಭೂಮಿಯಲ್ಲಿ ನಾಟಕದ ನಾಟಕೀಯ ಕ್ರಿಯೆಯನ್ನು ವೀಕ್ಷಿಸುತ್ತಿರುವ ಪ್ರೇಕ್ಷಕ ಆ ಪಾತ್ರ ಸನ್ನಿವೇಶಗಳಲ್ಲಿ ಭಾವನಾತ್ಮಕ ತಾದಾತ್ಮತೆ ಹೊಂದುವುದು ಸಾಮಾನ್ಯ. ಪ್ರೇಕ್ಷಕ ತಾನು ನೋಡುತ್ತಿರುವುದು ನಾಟಕ ಎಂದು ಗೊತ್ತಿದ್ದೂ ನಾಟಕದ ಪಾತ್ರ ಸನ್ನಿವೇಷಗಳೊಡನೆ ತನ್ನ ದೈನಂದಿನ ಬದುಕಿನ ಆಗು ಹೋಗುಗಳ ಅನುಭವದ ಹಿನ್ನೆಲೆಯಲ್ಲಿ ಒಂದು ರೀತಿ ತಾನು ನೋಡುತ್ತಿರುವ ಪಾತ್ರ ಕಥೆಯೊಂದಿಗೆ ಸಮೀಕರಿಸಿಕೊಳ್ಳುತ್ತಿರುತ್ತಾನೆ. ವಾಸ್ತವವಾದಿ ನಾಟಕಗಳಲ್ಲಂತೂ ಈ ಮಾತು ಸತ್ಯ. ಹೀಗಾಗಿ ಪ್ರೇಕ್ಷಕ ತನ್ನ ವೈಚಾರಿಕ ಚಿಕಿತ್ಸಕ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ ಎಂಬ ಒಂದು ವಾದವಿದೆ. ಈ ಕಾರಣಕ್ಕಾಗಿ ಬ್ರೆಕ್ಟನಂತಹ ನಾಟಕಕಾರರು ದೂರೀಕರಣ (Elianation) ತಂತ್ರವನ್ನು ಬಳಸಿ (ಉದಾ: ನಿರೂಪಣಾತ್ಮಕ ತಂತ್ರ; ಒಮ್ಮೆಲೆ ಪಾತ್ರಧಾರಿ ಹೊರಬಂದು ಕೇವಲ ನಟನಾಗಿ ಆ ಪಾತ್ರದ ಸನ್ನಿವೇಷದ ವೈಚಾರಿಕ ವಿಮರ್ಶೆ ಮಾಡುವ ರೀತಿ, ಹಾಡುಗಳ ಬಳಕೆ ಮಾಡುವುದು ಇತ್ಯಾದಿ). ಪ್ರೇಕ್ಷಕ ನಾಟಕದ ಕ್ರಿಯೆಯಲ್ಲಿ ಭವನಾತ್ಮಕ ತಾದಾತ್ಮತೆಯಲ್ಲಿ ಕೊಚ್ಚಿ ಹೋಗದೇ ವೈಚಾರಿಕ ವಿವೇಚನೆಯ ಎಚ್ಚರವನ್ನು ಉಳಿಸಿಕೊಂಡು ತನ್ನದೇ ರಿತಿಯಲ್ಲಿ ನಾಟಕದ ಕ್ರಿಯೆಯನ್ನು ಅರ್ಥೈಸಿಕೊಳ್ಳಲು ಅನುಕೂಲವಾಗುವಂತೆ ನಾಟಕ ರಚನೆ ಮಾಡುತ್ತಾನೆ. ಈ ಅನುಕೂಲ ಅಂದರೆ ಪ್ರೇಕ್ಷಕ ತನ್ನ ವೈಚಾರಿಕ ಶಕ್ತಿಯನ್ನು ಎಚ್ಚರವಾಗಿ ಇಟ್ಟುಕೊಳ್ಳಲು ಗೊಂಬೆ ಆಟದ ರಂಗಭೂಮಿ ಹೆಚ್ಚು ಪೂರಕವಾಗಿದೆ. ಏಕೆಂದರೆ ಅಲ್ಲಿ ಮಾತನಾಡುವವರು ನಿರ್ಜೀವ ಗೊಂಬೆಗಳು. ಆ ಗೊಂಬೆಗಳು ಅದಾಗಲೇ ಪಾತ್ರದಿಂದ ಒಂದು ನಿರ್ದಿಷ್ಟ ಸ್ಥಾಯೀ ಭಾವದ ಆಕೃತಿ ಪಡೆದು ಎಲಿಯನೇಟ ಆಗಿರುತ್ತವೆ. ಹೀಗಾಗಿ ಗೊಂಬೆ ಆಟಗಳಲ್ಲಿ ಹೆಚ್ಚು ನಿರ್ಭಿಡೆಯಿಂದ ಕಥಾವಸ್ತು ಅಥವಾ ವಿಷಯಗಳನ್ನು ಆಯ್ದುಕೊಂಡು ಪ್ರದರ್ಶಿಸಿ ಪ್ರೇಕ್ಷಕರನ್ನು ಚಿಂತನೆಗೆ ಹಚ್ಚಬಹುದು. ಪಾತ್ರಗಳ ಸಂಕೀರ್ಣತೆಗಿಂತ ಹೆಚ್ಚು ಸ್ಪಷ್ಟತೆ, ಸರಳ ರೀತಿಯ ಗೊಂಬೆ ಪಾತ್ರಗಳೇ ಗೊಂಬೆ ಆಟದಲ್ಲಿ ಹೆಚ್ಚಾಗಿ ಕಾಣಿಸಿಕೊಂಡು ಪ್ರೇಕ್ಷಕನಿಗೆ ನೇರ ಅರ್ಥವಾಗುವಂತಿರುತ್ತವೆ. ಬಹುಶಃ ಈ ಕಾರಣಕ್ಕೆ ಗೊಂಬೆ ಆಟಗಳನ್ನು ಮಕ್ಕಳ ರಂಜನೆಗೆ, ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಬಳಸುವ ರೂಢಿ ಇದೆ.



ಗೊಂಬೆ ಮನೆಯ ಒಳಗಡೆ ಗೊಂಬೆ ಆಡಿಸುತ್ತಿರುವ ಮಕ್ಕಳು

ಗೊಂಬೆ ಆಟಗಳಲ್ಲಿ ಸಾಮಾನ್ಯವಾಗಿ ಕ್ಯಾರೆಕ್ಟರ್‌ಗಳಿಗಿಂತ ಕ್ಯಾರಿಕೇಚರ್ (ವಿಕಟ ಚಿತ್ರಣ)ಗಳೇ ರಂಗದ ಮೇಲೆ ಬರುತ್ತವೆ. ನಾಟಕಗಳಲ್ಲಿ ಬರೆದ ನಾಟಕದ ಪಾತ್ರಗಳಿಗೆ ಜೀವ ತುಂಬುವವರು ನಟರು. ಗೊಂಬೆ ನಾಟಕಗಳಲ್ಲಿ ಇನ್ನೂ ಒಂದು ಆಯಾಮ ಈ ಪ್ರಕ್ರಿಯೆಯಲ್ಲಿ ಸೇರಿಕೊಳ್ಳುತ್ತದೆ, ಅದೆಂದರೆ ಗೊಂಬೆಗಳ ರಚನೆ, ನಾಟಕ ರಚನೆ ಆ ಗೊಂಬೆಗಳಿಗೆ ಜೀವ ತುಂಬುವ ಗೊಂಬೆ ಆಟಗಾರ ಅಥವಾ ನಟ ಹೀಗೆ ಮೂರು ಆಯಾಮದಲ್ಲಿ ಗೊಂಬೆ ಆಟ ಕಟ್ಟಲ್ಪಡುತ್ತದೆ. ಗೊಂಬೆಗಳ ರಚನೆಯೇ ಒಂದು ಕಲಾ ಶಿಸ್ತಾಗಿ ಬೆಳೆಯುವುದು ಗೊಂಬೆ ಆಟದ ಇನ್ನೊಂದು ವೈಶಿಷ್ಟ್ಯ. ಮುಖ್ಯ ನಾಟಕಗಳ ರಂಗ ಪ್ರಯೋಗದಲ್ಲಿರುವ ನಟರ ಧ್ವನಿ ಮತ್ತು ಚಲನೆ ಗೊಂಬೆ ಆಟದಲ್ಲಿಯೂ ಇರುತ್ತದೆ. ಆದರೆ ಇಲ್ಲಿ ನಟ ಗೊಂಬೆಗಳಿಗೆ ಧ್ವನಿ ಮಾತ್ರ ಕೊಡುತ್ತಿದ್ದು, ಚಲನೆಯನ್ನು ಗೊಂಬೆಗಳೇ ನಟನ ನಿಯಂತ್ರಣದಿಂದ ಮಾಡುತ್ತವೆ. ನಟನ ವಿಶಿಷ್ಟ ಧ್ವನಿ ಏರಿಳಿತ, ಚಲನೆ ನಿಯಂತ್ರಣದಿಂದ ಗೊಂಬೆ ಆಟಕ್ಕೆ ಒಂದು ಅವಾಸ್ತವ ನೆಲೆ ತಾನೇ ನಿರ್ಮಾಣವಾಗಿ ಬಿಡುತ್ತದೆ. ಈ ಅವಾಸ್ತವ ರಂಗ ಪ್ರಯೋಗದ ನಿರ್ಮಾಣದ ಕಾರಣಕ್ಕಾಗಿಯೇ ಗೊಂಬೆ ಆಟ ಮಕ್ಕಳಿಗೆ ಹತ್ತಿರವಾಗುತ್ತದೆ. ಹಾಗೆ ವಿಶಿಷ್ಟ ರಂಗಕಲಾ ಪ್ರಕಾರವಾಗಿಯೂ ಪ್ರೇಕ್ಷಕರ ಗಮನ ಸೆಳೆಯುತ್ತದೆ.

## 2.11 ಮಕ್ಕಳ ಶೈಕ್ಷಣಿಕ ಕ್ಷೇತ್ರದಲ್ಲಿ ಗೊಂಬೆ ಆಟ:

ಗೊಂಬೆ ಆಟ ಮನರಂಜನೆಯ ಮಾಧ್ಯಮವಾಗಿದ್ದಂತೆ ಶೈಕ್ಷಣಿಕ ಆಯಾಮ ಕೂಡಾ ಈ ಮಾಧ್ಯಮಕ್ಕೆ ಇದೆ. ಪ್ರಾಥಮಿಕ ಹಾಗೂ ಪೂರ್ವ ಪ್ರಾಥಮಿಕ ಹಂತದ ಶಿಕ್ಷಣದಲ್ಲಿ ಇದರ ಬಳಕೆ ಇತ್ತೀಚೆಗೆ ಹೆಚ್ಚು ಹೆಚ್ಚಾಗಿ ಆಗುತ್ತಿದೆ. ನರ್ಸರಿ ಹಂತದಲ್ಲಂತೂ ಮಕ್ಕಳಿಗೆ ಶಿಕ್ಷಕಿ(ಕ) ಪಾಠ ಮಾಡುವಾಗ, ಕಥೆ ಹೇಳುವಾಗ ಗೊಂಬೆ ಹಾಗೂ ಚಿತ್ರಗಳನ್ನು ಬಳಸುವ ರೂಢಿ ಈಗ ವ್ಯಾಪಕವಾಗಿದೆ. ಈ ಹಂತದಲ್ಲಿ ಕೇಂದ್ರದ Centre for Cultural Resources and Training (CCRT) ಶಾಖೆಯು ಗೊಂಬೆ ಆಟದ ಕಾರ್ಯಾಗಾರವನ್ನು ಶಿಕ್ಷಕರಿಗಾಗಿ ಹಮ್ಮಿಕೊಂಡು ಶಿಕ್ಷಣದಲ್ಲಿ ಗೊಂಬೆ ಆಟದ ಅಳವಡಿಕೆ ಕುರಿತು ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳಲು ಪ್ರಯುತ್ನಿಸುತ್ತಿದೆ.

ಗೊಂಬೆಗಳು ಮಕ್ಕಳಿಗೆ ಇಷ್ಟವಾಗುವುದು ಅದರ exaggerated ಮತ್ತು distortionಗಳಿಂದಾದ ವಿಚಿತ್ರ ಆಕೃತಿಗಳಿಂದಾಗಿ. ಹಾಗೆ ಅಂತಹ ಗೊಂಬೆಗಳನ್ನು ವಿನ್ಯಾಸ ಮಾಡುವ ಕಲಾವಿದ ಮಕ್ಕಳಿಗೆ ಇಷ್ಟವಾಗುವ ಹಾಗೆ ಅದಕ್ಕೆ ಪ್ರಾದೇಶಿಕ ವಿನ್ಯಾಸಗಳ ನವೀನ ರೂಪ ಕೊಡುತ್ತಿರುತ್ತಾನೆ. ಅಲ್ಲದೆ inanimate ವಸ್ತುವಾದ ಗೊಂಬೆ, ಆಟಗಾರನ ಪ್ರತಿಭೆಯಿಂದ animate ಆಗಿ ಪಾತ್ರವಾಗುವ ರೀತಿಯಿಂದಾಗಿ ಮಕ್ಕಳಿಗೆ ಮೋಜೆನಿಸುತ್ತದೆ. ಗೊಂಬೆ ಆಟ ಮತ್ತು ಗೊಂಬೆಗಳ ವಿನ್ಯಾಸ ರಿಯಲಿಸ್ಟಿಕ್ ಮತ್ತು ಅಬಸ್ಟ್ರ್ಯಾಕ್ಟ್ ಎರಡೂ ಆಗಿದ್ದು, ಮಕ್ಕಳ ಮನಸ್ಸು ಈ ಎರಡೂ ರೀತಿಯಲ್ಲಿ ಕ್ರಿಯಾಶೀಲವಾಗಿರುವುದರಿಂದ ಅವರಿಗೆ ಗೊಂಬೆ ಆಟ ಹೆಚ್ಚು ಹತ್ತಿರವಾಗುತ್ತದೆ.

ಗೊಂಬೆ ಆಟದಲ್ಲಿ ಗೊಂಬೆಗಳ ವಿನ್ಯಾಸಕ್ಕಾಗಿ ಬಳಸುವ ವಸ್ತು ಕೂಡಾ ಅಷ್ಟೇ ಮಹತ್ವದ್ದಾಗಿದ್ದು, ಮಕ್ಕಳಿಗೆ ಗೊಂಬೆ ಆಟ ಇಷ್ಟವಾಗುತ್ತದೆ. ಒಬ್ಬ ಗೊಂಬೆ ವಿನ್ಯಾಸಕಾರ ಕಟ್ಟಿಗೆ ತುಂಡು, ಲೋಹ, ವೈರ್, ತಂತಿ, ಪೇಪರ್, ಬಟ್ಟೆ, ಲೆದರ್, ಕಾರ್ಡಶೀಟ್ ಇತ್ಯಾದಿ ಬೇರೆ ಬೇರೆ ವಸ್ತುಗಳನ್ನು ಬಳಸಿ ಗೊಂಬೆಗಳನ್ನು ವಿನ್ಯಾಸ ಮಾಡುವುದರಿಂದ ಮಕ್ಕಳಿಗೆ ತಮ್ಮ ಸುತ್ತ ಮುತ್ತಲಿನ ವಸ್ತುಗಳೇ ಗೊಂಬೆಗಳಾಗಿ ವಿವಿಧ ಆಕೃತಿ ಪಡೆಯುವುದರಿಂದ ಗೊಂಬೆ ಆಟ ಇಷ್ಟವಾಗುತ್ತದೆ. ಅಲ್ಲದೆ ಒಬ್ಬ ಶಿಕ್ಷಕಿ ಕ್ಲಾಸ್ ರೂಮಿನಲ್ಲಿಯೇ ತನ್ನ ವಿದ್ಯಾರ್ಥಿಗಳೊಂದಿಗೆ ಕೆಲ ಗೊಂಬೆಗಳನ್ನು ಇಟ್ಟುಕೊಂಡು ಆತ್ಮೀಯವಾಗಿ ಸಂದರ್ಭಕ್ಕೆ ತಕ್ಕಂತೆ ಗೊಂಬೆಗಳನ್ನು ತೋರಿಸುತ್ತಾ ಕಥೆಯನ್ನೋ, ಪಾಠವನ್ನೋ ಹೇಳುತ್ತಾ ಹೋಗುವುದರಿಂದ ಮಕ್ಕಳಿಗೆ ಈ visual ಮತ್ತು Narration ಎರಡರ ಮಿಶ್ರಣದಿಂದ ಇಡೀ ಪಾಠವನ್ನು ತುಂಬಾ ಆಪ್ತವಾಗಿಸಿಕೊಂಡು ಗಮನಿಸುತ್ತಾರೆ. ಈಗಾಗಲೇ ಹೇಳಿದಂತೆ inanimate ವಸ್ತುಗಳಾದ ಹೂವಿನ ಕುಂಡಲಿ (Pots), ಕುರ್ಚಿ, ಮೇಜು, ಮನೆ ಇತ್ಯಾದಿಗಳು ಪಾತ್ರಗಳಾಗಿ ಮಾತನಾಡುವುದರಿಂದ ಅವರ ಕಲ್ಪನಾಶಕ್ತಿ ಹಿಗ್ಗುತ್ತಾ ಹೋಗುವುದರಿಂದ ಗೊಂಬೆ ಆಟ ಅವರಿಗೆ ಹತ್ತಿರವಾಗುತ್ತದೆ. ಈ ಕಾರಣಕ್ಕಾಗಿ ವಿಜ್ಞಾನ, ಗಣಿತದಂತಹ ವಿಷಯಗಳನ್ನೂ ಗೊಂಬೆ ಆಟದ ಮುಖಾಂತರ ಮಕ್ಕಳಿಗೆ ಕಲಿಸಿ ಕೊಡುವ ಸಾಧ್ಯತೆಗಳನ್ನು ಇತ್ತೀಚೆಗೆ ಪ್ರಯತ್ನಿಸಲಾಗುತ್ತದೆ. ಉದಾ: ಗಾಳಿ ಹೇಗೆ ಬಿಸುತ್ತದೆ ಎಂಬ ವಿಷಯದ ಅರಿವನ್ನು ಮಕ್ಕಳಿಗೆ ಮೂಡಿಸಲು ಕೆಲಗಿಡಗಳ, ಮೋಡಗಳ ಅಥವಾ ಕಣ್ಣಿಗೆ ಕಾಣದ ಗಾಳಿಯೇ ಒಂದು ಪಾತ್ರವಾಗಿ ಗಾಳಿ ಹೇಗೆ ಬೀಸುತ್ತದೆ ಎಂಬ ಕಲ್ಪನೆಯನ್ನು ಮಕ್ಕಳಿಗೆ ತುಂಬಾ ತಮಾಷೆ ಬರುವಂತೆ ಅವರಿಗೆ ನೆನಪಿನಲ್ಲಿ ಉಳಿಯುವಂತೆ ತಿಳಿಸುವ ಅನುಕೂಲ ಗೊಂಬೆ ಆಟಕ್ಕೆ ಇದೆ. ಗೊಂಬೆ ಆಟಕ್ಕೆ ಮುಖ್ಯ ವಾಹಿನಿಯ ರಂಗಭೂಮಿಯಂತೆ, ಸಂಕೀರ್ಣ ಸಿದ್ಧತೆ ಅಷ್ಟಾಗಿ ಬೇಕಿಲ್ಲ. ಪಾತ್ರಧಾರಿ ಅಥವಾ ಗೊಂಬೆ ಆಟಗಾರ ಒಬ್ಬನೇ ಇದ್ದರೆ ಸಾಕು (ಆತ ಶಿಕ್ಷಕ, ಶಿಕ್ಷಕಿ ಆಗಿರಬಹುದು). ಕೆಲ ಗೊಂಬೆಗಳನ್ನು ಇಟ್ಟುಕೊಂಡು, ವಿವಿಧ ಧ್ವನಿ ವಿನ್ಯಾಸಗಳ ಮೂಲಕ ಕಥಾನಕವನ್ನು ಕಟ್ಟಬಹುದು. ಹೀಗಾಗಿ ಈ ತಾಂತ್ರಿಕ ಅನುಕೂಲತೆಯಿಂದಾಗಿ ಗೊಂಬೆ ಆಟವನ್ನು ಸುಲಭವಾಗಿ ಒಂದು ಕ್ಲಾಸ್‌ರೂಮ್ ಚಟುವಟಿಕೆಯಾಗಿ ಕೈಕೊಳ್ಳಬಹುದು.

## 2.12 ಜನರಲ್ಲಿ ಸಾಮಾಜಿಕ ಅರಿವು ಮೂಡಿಸಲು ಗೊಂಬೆ ಆಟ:

ನಮ್ಮ ಜನಪದ ಕಲೆಗಳು ಜನಸಾಮಾನ್ಯರ ಮಧ್ಯದಲ್ಲೇ ಹುಟ್ಟಿ ಬೆಳೆದು ಬಂದಿವೆ. ದೊಡ್ಡಾಟ, ಸಣ್ಣಾಟ, ಡೊಳ್ಳು ಕುಣಿತ ಹಾಗೆ ಗೊಂಬೆಯಾಟವೂ ಜನಪದ ಕಲೆಯಾಗಿರುವುದರಿಂದ ಆ ರಂಗಕಲೆ ನೇರವಾಗಿ ಜನರೊಡನೆ ಸಂವಹಿಸುತ್ತದೆ. ಮುಖ್ಯ ವಾಹಿನಿಯ ನಾಟಕದ ಪ್ರದರ್ಶನಕ್ಕೆ ಕೆಲ ಕಟ್ಟುಪಾಡುಗಳಿವೆ. ಅದು ಸುಸಜ್ಜಿತ ರಂಗಮಂದಿರದಲ್ಲೇ ನಡೆಯಬೇಕು. ಮುಖ್ಯ ನಾಟಕದ ಸಂಕೀರ್ಣ ಸೂಕ್ಷ್ಮ ಸಂವಹನವನ್ನು ಗ್ರಹಿಸಲು ಸೆಲೆಕ್ಟೆಡ್ ಪ್ರೇಕ್ಷಕನೇ ಇರಬೇಕು. ಹೀಗೆ ಈ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಆದರೆ ಗೊಂಬೆ ಆಟ, ಬೀದಿ ನಾಟಕಗಳಂತಹ ಪ್ರದರ್ಶಕ ಕಲೆಗಳಿಗೆ ಈ ಕಟ್ಟು ಪಾಡುಗಳಿಲ್ಲ. ಈ ಕಲೆಗಳನ್ನು ಎಲ್ಲೆಂದರಲ್ಲಿ ಕಡಿಮೆ ವ್ಯವಸ್ಥೆಯೊಂದಿಗೆ ಪ್ರದರ್ಶಿಸಬಹುದು. ಕಟಕಿ, ಹಾಸ್ಯ, ತತ್‌ಕ್ಷಣದ ಸಾಮಾಜಿಕ ವಿಮರ್ಶೆ ಇತ್ಯಾದಿ ಅಭಿವ್ಯಕ್ತಿ ಸಾಧ್ಯತೆಗಳು ಗೊಂಬೆ ಆಟಕ್ಕೆ ಹೆಚ್ಚಿರುವುದರಿಂದ ತನ್ನ ಸುತ್ತಲಿನ ಸಾಮಾನ್ಯ ವೀಕ್ಷಕನನ್ನು ಈ ಮಾಧ್ಯಮ ತತ್‌ಕ್ಷಣ ಆಕರ್ಷಿಸುತ್ತದೆ. ಈ ಕಾರಣಕ್ಕಾಗಿಯೇ ಸಾಮಾಜಿಕ ಅನಿಷ್ಠಗಳನ್ನು ನೇರವಾಗಿ ವಿಡಂಬಿಸುವ ಅನುಕೂಲ ಈ ಮಾಧ್ಯಮಕ್ಕೆ ಇರುವುದರಿಂದ ಜನರಲ್ಲಿ ಸಾಮಾಜಿಕ ಅರಿವು ಮೂಡಿಸುವಲ್ಲಿ ಈ ಮಾಧ್ಯಮದ ಬಳಕೆ ಹೆಚ್ಚು ಹೆಚ್ಚು ಅನುತ್ತಿದೆ.

ಗೊಂಬೆ ಆಟ ಹಾಗೂ ಬೀದಿ ನಾಟಕಗಳಿಗೆ 10–15 ನಿಮಿಷದ ಅವಧಿಯ ವಿಷಯಗಳನ್ನೂ ಆಟವಾಗಿ ಮಾರ್ಪಾಟು ಮಾಡಿಕೊಂಡು ಪ್ರದರ್ಶಿಸುವ ಅನುಕೂಲ ಇರುವುದರಿಂದ ದಿನನಿತ್ಯದ ಸಾಮಾಜಿಕ ಸಮಸ್ಯೆಗಳನ್ನು ಪ್ರೇಕ್ಷಕರಿಗೆ ಅರಿವು ಬರುವಂತೆ ಬಿಂಬಿಸಬಹುದು. ಈ ಅನುಕೂಲ ಮುಖ್ಯ ಸಂಕೀರ್ಣ ರಂಗ ಪ್ರದರ್ಶನಕ್ಕೆ ಕಡಿಮೆ, ವಿಮರ್ಶಾತ್ಮಕ ಆಶುವಿಸ್ತರಣೆ (Improvisation)ಯನ್ನು ಗೊಂಬೆ ಆಟದಲ್ಲಿ ಸುಲಭವಾಗಿ ಮಾಡಿಕೊಳ್ಳಬಹುದು. ನಿರಕ್ಷರಿಗಳಿಗೆ ಪ್ರೌಢ ಶಿಕ್ಷಣ, ವರದಕ್ಷಿಣೆಯ ಸಮಸ್ಯೆಗಳು, ಕೊಳಚೆ ನಿರ್ಮೂಲನೆ, ಫ್ಯಾಮಿಲಿ ಪ್ಲಾನಿಂಗ್, ಏಡ್ಸ್ ನಿರ್ಮೂಲನೆ, ಚಿಕನ್ ಫಾಕ್ಸ್, ದಡಾರ್ ಲಸಿಕೆ ಕುರಿತು ಜನತೆಯಲ್ಲಿ ಅರಿವು ಹಾಗೆ ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆಯಂತಹ ವಿಷಯಗಳನ್ನು ಗೊಂಬೆ ಆಟದಂತಹ ಮಾಧ್ಯಮದಿಂದ ಜನರಿಗೆ ನೇರವಾಗಿ ತಿಳಿಸಬಹುದು. ಗೊಂಬೆಗಳು ಮನುಷ್ಯನ ಕಲ್ಪನಾ ಶಕ್ತಿಯ ಮೂರ್ತ ರೂಪವಾದುದರಿಂದ ಆತ ಯಾವುದೇ ವಿಷಯಗಳಿಗೆ ಮೂರ್ತ ರೂಪವನ್ನು ಗೊಂಬೆಗಳ ಮೂಲಕ ಕೊಡಬಲ್ಲ. ಆ ಮೂಲಕ ಜನರಲ್ಲಿ ಸಾಮಾಜಿಕ ಜಾಗೃತಿ ಮೂಡಿಸಬಲ್ಲ.

## 2.13 ಗೊಂಬೆ ಆಟದ ರಂಗಾವರಣ ಮತ್ತು ರಂಗ ಸಜ್ಜಿಕೆ (Stage, Space, and Sets in Puppet Plays)

ಯಾವುದೇ ರಂಗ ಪ್ರಯೋಗದಲ್ಲಿ Acting Space, ಒಂದು ಕಥಾವಸ್ತು ಪ್ರೇಕ್ಷಕನ ಮೇಲೆ ಬೀರುವ ಪರಿಣಾಮದ ದೃಷ್ಟಿಯಿಂದ ಬಹಳ ಮಹತ್ವದ ರಂಗಾಂಶವಾಗಿದೆ. ಮತ್ತು Acting Space ಕೂಡಾ ವಸ್ತುವಿನ ಮೇಲೆ ತನ್ನದೇ ನಿಯಂತ್ರಣ ಮಾಡುತ್ತಿರುತ್ತದೆ. ಆ Acting Space ರಂಗ ಪ್ರಯೋಗದ ಕೆಲ ರೂಢಿಗಳನ್ನು (Conventions) ತರುತ್ತದೆ. ಉದಾ: ಒಬ್ಬ ನಟ ನಾನು ಆಫೀಸಿಗೆ ಹೋಗುತ್ತೇನೆ ಎಂದು ವಿಂಗ್ಸಿನ ಒಳಗೆ ಹೋದರೆ ಪ್ರೇಕ್ಷಕ ಆತ ಆಫೀಸಿಗೆ ಹೋದ ಎಂದು ತಿಳಿದುಕೊಳ್ಳುವಂತಹ ರೂಢಿಗಳು ರಂಗ ಪ್ರಯೋಗದ Acting Spaceಗೆ ಒದಗಿ ಬರುತ್ತವೆ. ನಾಟಕಗಳನ್ನು ಆಡುವವ ಮತ್ತು ನೋಡುವವ ಸ್ಥಳ ನಿರ್ದಿಷ್ಟತೆಯಿಂದ ರಂಗ ಪ್ರಯೋಗದ ಪರಿಣಾಮ ವಿಭಿನ್ನವಾಗಿರುತ್ತದೆ. ಈಗ ನಮಗೆ ಸಾಮಾನ್ಯವಾಗಿ ದೇಶದ ಎಲ್ಲೆಡೆ ಕಾಣಸಿಗುವುದು ಚಿತ್ರ ಚೌಕಟ್ಟು (Procenium) ರಂಗಮಂದಿರಗಳು. ಇಲ್ಲಿ ಒಂದು ಸೂರಿನಡಿ (Auditorium) ಪ್ರೇಕ್ಷಕ ಮತ್ತು ನಟರ ಮಧ್ಯೆ ನಾಟಕ ಕ್ರಿಯೆ ತೆರೆದುಕೊಳ್ಳುತ್ತದೆ. ಹಾಗೆ ನೋಡುಗರ ಒಂದು ವರ್ಗ ಆಡುವವರ ಒಂದು ವರ್ಗ ಎಂಬ ನಿರ್ದಿಷ್ಟವಾಗಿ ಬೈಫರ್‌ಗೇಶನ್ ಮಾಡುವ ಒಂದು ಚೌಕಟ್ಟು ಇರುತ್ತದೆ. ಸಾಮಾನ್ಯವಾಗಿ ಈ ರಂಗಮಂದಿರದ ರಂಗಸ್ಥಳ 30 X 40 ಅಡಿ ಉದ್ದಗಲ ಇರುತ್ತದೆ. ಪ್ರೇಕ್ಷಾಂಗಣ ಸುಮಾರು 80 ಅಡಿಯಿಂದ 100 ಅಡಿ ಉದ್ದ 50–60 ಅಡಿ ಅಗಲ ಇದ್ದು, ಸುಮಾರು 400 ರಿಂದ 500 ಜನ ಕುಳಿತುಕೊಳ್ಳಬಹುದಾದ ಆಸನ ವ್ಯವಸ್ಥೆ ಇರುತ್ತದೆ. ಗೊಂಬೆ ಆಟಕ್ಕೆ ಇಷ್ಟು ದೊಡ್ಡ ರಂಗಮಂದಿರದ ಅವಶ್ಯಕತೆ ಇಲ್ಲ. ಹೆಚ್ಚಾಗಿ ಗೊಂಬೆ ಆಟಗಳು ಹಿಂದಿನ ಕಾಲದಿಂದಲೂ ಗುಡಿ ಗುಂಡಾರಗಳಲ್ಲಿ ಪ್ರದರ್ಶನಗೊಳ್ಳುತ್ತಾ ಬಂದಿವೆ. ರಂಗ ಮಂದಿರದ ಬಳಕೆ ಪ್ರಾರಂಭವಾದುದು ಇತ್ತೀಚೆಗೆ. ಪ್ರೇಕ್ಷಕ ಸಂಖ್ಯೆ ಬೆಳೆಯುತ್ತಾ ಹೋದಂತೆ ಗೊಂಬೆ ಆಟದಲ್ಲಿ ಸಂಭಾಷಣೆಯ ಮೇಲುಗೈ ಪಡೆಯುತ್ತಾ ಹೋಯಿತು. ಪ್ರೇಕ್ಷಕರ ಸಂಖ್ಯೆ ಹೆಚ್ಚಾಗುತ್ತಾ ಹೋದಂತೆ ಗೊಂಬೆಗಳು ಸ್ಪಷ್ಟವಾಗಿ ಕಾಣಿಸದಿದ್ದು, ತಾಂತ್ರಿಕ ಕಾರಣಕ್ಕಾಗಿ Audio ಭಾಗ ಡಾಮಿನೇಟ್ ಆಗಿರುವ ಸಾಧ್ಯತೆಯೂ ಇದೆ. ಪ್ರಸ್ತುತ ಸಂದರ್ಭದಲ್ಲಿ Audio ಮತ್ತು Video ಇದರಲ್ಲಿ ಸಮನ್ವಯ ಮಾಡಿ ಗೊಂಬೆ ಆಟವನ್ನು ಕಟ್ಟುವ ಅವಶ್ಯಕತೆಯಿದೆ.

ಸಾಮಾನ್ಯವಾಗಿ ಗೊಂಬೆಯಾಟದ ಪ್ರೊಸೇನಿಯಂ ಆರ್ಚ ಅಂದರೆ ಪ್ರೇಕ್ಷಕರಿಗೆ ಕಾಣಿಸುವ ಚಿತ್ರ ಚೌಕಟ್ಟು 8 ಅಡಿ ಉದ್ದ, 4 ಅಡಿ ಅಗಲವಿರುತ್ತದೆ. ಈ ಅಳತೆ ಪ್ರಯೋಗಗೊಳ್ಳುವ ಸ್ಥಳವನ್ನು ಪ್ರೇಕ್ಷಕರ ಸಂಖ್ಯೆಯು ಅನುಸರಿಸಿ ಚಿಕ್ಕದೂ, ದೊಡ್ಡದೂ ಆಗಬಹುದು. ಬಹಳ ಕಡಿಮೆ ಅಂದರೆ 3 ಅಡಿ ಅಗಲ 3 ಅಡಿ ಉದ್ದ, ಹಾಗೂ ದೊಡ್ಡದೆಂದರೆ 10 ಅಡಿ ಉದ್ದ 4 ಅಡಿ ಅಗಲದ ಅಳತೆಯ ರಂಗಸ್ಥಳವನ್ನು ನಿರ್ಮಿಸಿಕೊಳ್ಳಬಹುದು. ಗೊಂಬೆಯಾಟದ ರಂಗಸ್ಥಳವು ಸಾಮಾನ್ಯ ರಂಗಭೂಮಿಯ ರಂಗಸ್ಥಳ 40 ಅಡಿ ಉದ್ದ 30 ಅಡಿ ಅಗಲದ ಅಳತೆಗಿಂತ ಚಿಕ್ಕದಾಗೇ ಇರುತ್ತದೆ. ಆಧುನಿಕ ಗೊಂಬೆ ಆಟದ ಪ್ರೇಕ್ಷಾಗ್ರಹ, ಮಾಡರೇಟ ಆಗಿ ಸಣ್ಣದಿದ್ದಷ್ಟು ಆಟದ ಪರಿಣಾಮ ತೀವ್ರವಾಗಿರುತ್ತದೆ. ಪ್ರೇಕ್ಷಕರ ಸಂಖ್ಯೆ 200–300 ರವರೆಗೆ ಇರಬಹುದು. ಅಂದರೆ ಗೊಂಬೆಗಳು ಸ್ಪಷ್ಟವಾಗಿ ಕಾಣುತ್ತವೆ. ಇದು ಎಲ್ಲಾ ಮಾದರಿಯ ಗೊಂಬೆ ಆಟಕ್ಕೂ ಅನ್ವಯಿಸುತ್ತದೆ.



ಸೂತ್ರದ ಗೊಂಬೆಯಾಟದ ರಂಗ ಸಜ್ಜಿಕೆಯ ಹಿಂಭಾಗ ಖುರ್ಚಿ,
ಮೇಜುಗಳನ್ನು ಬಳಸಿದ್ದನ್ನು ಗಮನಿಸಿ

ಮಕ್ಕಳಿಗಾಗಿ ಗೊಂಬೆ ಆಟದ ವೇದಿಕೆಯನ್ನು ಶಾಲಾ ಕೊಠಡಿಗಳಲ್ಲೇ ಸಿದ್ಧಗೊಳಿಸಿಕೊಳ್ಳಬಹುದು. ಕೊಠಡಿಯಲ್ಲಿ ಇದ್ದ ಮೇಜು, ಡೆಸ್ಕ್, ಕುರ್ಚಿಗಳನ್ನು ಬಳಸಿ ಚಿತ್ರ ಚೌಕಟ್ಟು ವೇದಿಕೆ ಸಿದ್ಧಪಡಿಸಬಹುದು. 2ರಿಂದ 3 ಅಡಿ ಅಳತೆಯ ಟೇಬಲ್‌ಗೆ ಒಂದು ಬಟ್ಟೆ ಹಾಕಿ ಅದರ ಹಿಂದೆ ಗೊಂಬೆ ಆಟಗಾರರು ಕುಳಿತು ಕೈಗವಸು ಗೊಂಬೆ ಹಾಗೂ ಸಲಾಕೆ ಗೊಂಬೆಗಳನ್ನು ಆಡಿಸಬಹುದು. ಬ್ಯಾಕ್ ಸ್ಟೇಜ್‌ನಲ್ಲಿ ಡೆಸ್ಕ್ ಮತ್ತು ಬೆಂಚ್‌ಗಳನ್ನು ಬಳಸಿ ಗೊಂಬೆಗಳನ್ನು ಮಟ್ಟಸವಾಗಿ ಇಟ್ಟುಕೊಳ್ಳಲು ಅನುಕೂಲ ಮಾಡಿಕೊಳ್ಳಬಹುದು. ಗೊಂಬೆ ಆಟದ ಬ್ಯಾಕ್ ಸ್ಟೇಜ್‌ನಲ್ಲಿ ಸಾಕಷ್ಟು ಸ್ಥಳಾವಕಾಶ ಮಾಡಿಕೊಂಡರೆ ಗೊಂಬೆಗಳನ್ನು ಅನುಕ್ರಮವಾಗಿ ಇಡಲು ಮತ್ತು ಗೊಂಬೆ ಆಟಗಾರರು ಮುಕ್ತವಾಗಿ ಓಡಾಡಿ ಗೊಂಬೆ ಆಡಿಸಲು ಅನುಕೂಲವಾಗುತ್ತದೆ.

ಶಾಲೆಗಳಲ್ಲಿ ದೊರೆಯುವ ಟೇಬಲ್‌ಗಳನ್ನು ವಿವಿಧ ರೀತಿಯಲ್ಲಿ ಬಳಸಿ ಸುಲಭವಾಗಿ ಗೊಂಬೆ ರಂಗಸ್ಥಳವನ್ನು ನಿರ್ಮಿಸಿಕೊಳ್ಳಬಹುದು. ಒಂದು ಟೇಬಲ್ಲಿನ ಮೇಲೆ ಇನ್ನೊಂದು ಟೇಬಲ್‌ನ್ನು ತಲೆಕೆಳಗಾಗಿ ಇಟ್ಟು ಅದಕ್ಕೆ ಗಟ್ಟಿ ಬಿದಿರು ಕಂಬಗಳನ್ನು ಕಟ್ಟಿ ಅನುಕೂಲಕ್ಕೆ ತಕ್ಕಂತೆ ಶಾಲೆಯಲ್ಲೇ ದೊರೆಯುವ ಚಾಪೆ ಚಾದರ, ಗುಡಾರ ಬಳಸಿ ರಂಗಸ್ಥಳವನ್ನು ನಿರ್ಮಿಸಿಕೊಳ್ಳಬಹುದು.

ಸಲಾಕೆ ಹಾಗೂ ಕೈವಸು ಗೊಂಬೆ ಆಟಗಾರರು ಪ್ರೇಕ್ಷಕರಿಗೆ ಕಾಣದಂತೆ ಕೆಳಗೆ ಮರೆಯಾಗಿ ಕುಳಿತು ಅಥವಾ ನಿಂತು ಗೊಂಬೆಗಳನ್ನು ಪ್ರೇಕ್ಷಕರಿಗೆ ಕಾಣುವಂತೆ ಹಿಡಿದು ಆಡಿಸುತ್ತಾರೆ. ಹೀಗಾಗಿ ಗೊಂಬೆ ರಂಗ ಸ್ಥಳದ ಕೆಳಗಿನ ಭಾಗ ಸುಮಾರು 6 ಅಡಿ ಉದ್ದ ಕನಿಷ್ಠ 3 ಅಡಿ ಅಗಲದ ಬಟ್ಟೆಯಿಂದ ಮುಚ್ಚಲಾಗುತ್ತದೆ. ಈ ಅಳತೆಯನ್ನು ಅನುಕೂಲಕ್ಕೆ ತಕ್ಕಂತೆ ಹೆಚ್ಚು ಕಡಿಮೆ ಮಾಡಿಕೊಳ್ಳಬಹುದು. ಇನ್ನು ಗೊಂಬೆ ಆಟಗಾರ ನಿಂತುಕೊಂಡು ಕೆಳಗಿನಿಂದ ಗೊಂಬೆ ಆಡಿಸುತ್ತಿದ್ದರೆ ಆ ಆಟಗಾರನ ಎತ್ತರದ ಅಳತೆಗೆ ಅನುಗುಣವಾಗಿ ಬಟ್ಟೆಯಿಂದ ಕೆಳಗಿನ ಭಾಗ ಮುಚ್ಚಬೇಕಾಗುತ್ತದೆ. ಬಟ್ಟೆಯ ಉದ್ದ ಸಾಮಾನ್ಯವಾಗಿ ನೇಪಥ್ಯವನ್ನು ಮುಚ್ಚಲು ಬೇಕಾಗಿರುವುದರಿಂದ ಅದರ ಅಳತೆ ಆಟಗಾರ ಆಯ್ಕೆ ಮಾಡಿಕೊಳ್ಳುವ ಸ್ಥಳದ ಮೇಲೆ ನಿರ್ಧಾರವಾಗುತ್ತದೆ. ಕಥೆಯಲ್ಲಿ ಬರುವ ಹಿನ್ನೆಲೆಯ ರಂಗ ಸಜ್ಜಿಕೆಯನ್ನು ತೊಗಲು ಗೊಂಬೆ ಆಟವಾದರೆ ಆ ತೊಗಲಿನ ಮೇಲೆ ದೃಶ್ಯವನ್ನು ಬಿಡಿಸಿ ತೋರಿಸಬಹುದು.

ಸೂತ್ರ, ಸಲಾಕೆ ಹಾಗೂ ಕೈಗವಸು ಗೊಂಬೆ ಆಟದಲ್ಲಿ ಬರುವ ದೃಶ್ಯವನ್ನು ರಟ್ಟು, ಕಟ್ಟಿಗೆ ಮುಂತಾದ ವಸ್ತುಗಳನ್ನು ಬಳಸಿ ಹಿನ್ನೆಲೆ ದೃಶ್ಯವನ್ನು ಸಿದ್ಧಪಡಿಸಿಕೊಳ್ಳಬಹುದು.




ಸೂತ್ರದ ಗೊಂಬೆಯಾಟದ ರಂಗಸ್ಥಳದ ಒಂದು ನಕ್ಷೆ

ಗೊಂಬೆಯಾಟಗಾರರು ನಿಲ್ಲುವ ಸ್ಥಳ

ಇನ್ನೂ ತಂಡಕ್ಕೆ ಆರ್ಥಿಕ ಅನುಕೂಲತೆ ಇದ್ದರೆ ಇಡೀ ರಂಗಸ್ಥಳವನ್ನು ಕಬ್ಬಿನದ ಸಲಾಕೆ, ಹಿಂಜಿಸ್ ಬಳಸಿ ವೆಲ್ಡ ಮಾಡಿ, ಫೋಲ್ಡ ಮಾಡಲು ಅನುಕೋಲವಾಗುವಂತೆ ವಿನ್ಯಾಸಗೊಳಸಿ ಗೊಂಬೆ ಆಟದ ರಂಗಸ್ಥಳವನ್ನು ನಿರ್ಮಿಸಿಕೊಳ್ಳಬಹುದು. ಸಾಮಾನ್ಯವಾಗಿ ವೃತ್ತಿಪರ ಗೊಂಬೆ ಆಟದ ತಂಡದವರು ಬಹಳದಿನ ತಾಳಿಕೆ ಬರುವ ಇಚಿಥ ರಂಗಸ್ಥಳದ ಮಾದರಿಯನ್ನು ವಿನ್ಯಾಸಗೊಳಿಸಿಕೊಳ್ಳುತ್ತಾರೆ.



ಶಾಲೆಯ ಹೊರ ಆವರಣದಲ್ಲಿ ಸರಳವಾದ ರಂಗಸಜ್ಜಿಕೆಯಲ್ಲಿ (Glows Puppets)

ಸೂತ್ರದ ಗೊಂಬೆ ಆಟಗಾರರು ನಿಂತುಕೊಂಡು ಸೂತ್ರದಿಂದ ಗೊಂಬೆಗಳನ್ನು ಕೆಳಗೆ ಇಳಿಬಿಟ್ಟು ಕೆಳಗೆ ನೋಡುತ್ತಾ ಗೊಂಬೆ ಆಡಿಸುವ ರೂಢಿ ಸಾಮಾನ್ಯವಾದದ್ದು. ಸಲಾಕೆ ಗೊಂಬೆ, ಕೈಗವಸಗೊಂಬೆ, ಹಾಗೂ ನೆರಳು ಗೊಂಬೆಗಳನ್ನು ಗೊಂಬೆ ಆಟಗಾರ ಮೇಲು ನೋಡುತ್ತಾ ಗೊಂಬೆಯ ಚಲನವಲನವನ್ನು ನಿಯಂತ್ರಿಸುತ್ತಿರುತ್ತಾನೆ. ಇದು ಸೂತ್ರದ ಗೊಂಬೆ ಆಟಕ್ಕೂ ಇನ್ನಿತರ ಗೊಂಬೆ ಆಟಕ್ಕೂ ಇರುವ ಮುಖ್ಯ ವ್ಯತ್ಯಾಸ. ಸೂತ್ರದ ಗೊಂಬೆಗಳನ್ನು ಹೀಗೆ ಕೆಳಗೆ ಗಮನಿಸುತ್ತಾ ಪ್ರೊಸೀನಿಯಂ ಆರ್ಚಿನ ಮೇಲುಗಡೆಯಿಂದ ಆಡಿಸುವುದರಿಂದ ಆ ಗೊಂಬೆ ಆಟಗಾರ ಪ್ರೇಕ್ಷಕರಿಗೆ ಅಭಿಮುಖವಾಗಿ ಕಾಣದಂತೆ ಆರ್ಚಿಗೆ ಸಮಾನಾಂತರವಾಗಿ ಹಿಂಬದಿಯಲ್ಲಿ ನಿಂತುಕೊಂಡು ಗೊಂಬೆ ಆಡಿಸುತ್ತಾನೆ.

ಎಲ್ಲ ತರದ ಗೊಂಬೆ ಆಟಗಳಿಗೆ ಇಡೀ ರಂಗಸ್ಥಳವನ್ನು ನೀಲಿ ಅಥವಾ ಕಪ್ಪು ಪರದೆಯಿಂದ ವಿನ್ಯಾಸಗೊಳಿಸಿಕೊಂಡರೆ ಬಣ್ಣ ಬಣ್ಣದ ಗೊಂಬೆಗಳಿಗೆ ಒಂದು ನ್ಯೂಟ್ರಲ್ ಕಲರ್ ಬ್ಯಾಗ್ರೌಂಡ್ ಸಿಕ್ಕಂತಾಗಿ ಅವು ಹೆಚ್ಚು ಸ್ಫುಟವಾಗಿ ಆಕರ್ಷಣೀಯವಾಗಿ ಕಾಣಿಸಿಕೊಳ್ಳುತ್ತವೆ. ಸೂತ್ರದ ಗೊಂಬೆ ಆಟದ ರಂಗಸ್ಥಳ ಹಾಗೂ ತೊಗಲು ಗೊಂಬೆ ಆಟದ ರಂಗಸ್ಥಳವನ್ನು ಉದ್ದ ಅಗಲದ ಅಳತೆ ವಿನ್ಯಾಸದಲ್ಲಿ ಅನುಕೂಲಕ್ಕೆ ತಕ್ಕಂತೆ ಹೆಚ್ಚು ಕಡಿಮೆ ಮಾಡಿಕೊಳ್ಳಬಹುದು. ಆದರೆ ಪ್ರೇಕ್ಷಕರಿಗೆ ಕಾಣುವಂತೆ ಆಳದಲ್ಲಿ (Depth) ಬಹಳ ಬದಲಾವಣೆ ಮಾಡಿಕೊಳ್ಳಲು ಬರುವುದಿಲ್ಲ. ಆದರೆ ಸಲಾಕೆ ಗೊಂಬೆ ಆಟದಲ್ಲಿ ಆಳವನ್ನು ಹೆಚ್ಚಿಸಿಕೊಂಡು ಸಮರ್ಥವಾಗಿ ಆಟದಲ್ಲಿ ಪಾತ್ರಗಳ ಆಕೃತಿಗಳನ್ನು ಕಥೆಗೆ ತಕ್ಕಂತೆ Composition ಮಾಡಿಕೊಳ್ಳಬಹುದು.

ತೊಗಲುಗೊಂಬೆ ಆಟ ಅಥವಾ ನೆರಳುಗೊಂಬೆ ಆಟವು ಸೂತ್ರ, ಗ್ಲೌಸ್ ಮತ್ತು ಸಲಾಕೆ ಗೊಂಬೆ ಆಟಕ್ಕಿಂತ ತೀರಾ ಭಿನ್ನವಾದದ್ದು. ತೊಗಲು ಗೊಂಬೆಗಳು ದ್ವಿಮಾನ ರೀತಿಯಲ್ಲಿ ರಚನೆಯಾಗಿರುತ್ತವೆ. ಅಂದರೆ ಉದ್ದ ಮತ್ತು ಎತ್ತರ ಅಳತೆ ಮಾತ್ರ ಇದ್ದು, ಆಳದ ಅಳತೆ ಇರುವುದಿಲ್ಲ. ಇವು ಚಪ್ಪಟೆ ಗೊಂಬೆಗಳು. ಉಳಿದ ಮೂರು ರೀತಿಯ ಗೊಂಬೆಗಳು ತ್ರಿಮಾನ ಅಳತೆಯಲ್ಲಿ ವಿನ್ಯಾಸಗೊಂಡಿರುತ್ತವೆ. ತೊಗಲು ಗೊಂಬೆ ಆಟದಲ್ಲಿ ಪ್ರೇಕ್ಷಕರಿಗೆ ಕಾಣಿಸುವ ಭಾಗವು ತೆಳುವಾದ ಬಿಳಿ ಪರದೆಯಿಂದ ಮುಚ್ಚಿದ್ದು, ಉಳಿದ ಭಾಗವು ಕಪ್ಪು ಪರದೆಯಿಂದ ಮುಚ್ಚಿರುತ್ತದೆ. ಆ ಪರದೆಗೆ ಹಿಂದಿನಿಂದ ಬೆಳಕಿನ ಆಕರವನ್ನು ಇಟ್ಟಿರುತ್ತಾರೆ. ಬೆಳಕಿನ ಆಕರ ಹಾಗೂ ಬಿಳಿಪರದೆಯ ಮಧ್ಯದಲ್ಲಿ ತೊಗಲು ಗೊಂಬೆಯನ್ನು ಹಿಡಿಯಲು ಬೆಳಕು ಆ ಗೊಂಬೆ ಮೂಲಕ ಹಾಯ್ದು ಪರದೆ ಮೇಲೆ ಅದರ ನೆರಳು (Sillout) ಬೀಳುತ್ತದೆ. ಗೊಂಬೆಗಳು ಪಾರದರ್ಶಕವಾಗಿರುವುದರಿಂದ ಅದರ ಆಕೃತಿಗಳು ಪ್ರೇಕ್ಷಕರಿಗೆ ಗೋಚರಿಸುತ್ತವೆ. ಗೊಂಬೆ ಆಟಗಾರ ಅವುಗಳ ಚಲನೆಯ ಮೂಲಕ ರಂಗಕ್ರಿಯೆಯನ್ನು ಕಟ್ಟುತ್ತಾ ಹೋಗುತ್ತಾನೆ. ತೊಗಲು ಗೊಂಬೆ ಆಟಕ್ಕೆ ಬೆಳಕಿನ ಆಕರವನ್ನು ಗೊಂಬೆಯ ಹಿಂದೆಯೇ ವಿನ್ಯಾಸಗೊಳಿಸಬೇಕು. ಹೆಸರೇ ಸೂಚಿಸುವಂತೆ ಇದು ನೆರಳುಗೊಂಬೆಯಾಟ, ಗೊಂಬೆಯ ನೆರಳು (Sillout) ಇಲ್ಲಿ ಮುಖ್ಯ. ಉಳಿದ ಮೂರು ಮಾದರಿ ಗೊಂಬೆ ಆಟದಲ್ಲಿ ಬೆಳಕಿನ ಆಕರಗಳನ್ನು ಎದುರಿನಿಂದ ಪಾರ್ಶ್ವ ಕೋನದಿಂದಲೂ ಕೊಡಬಹುದು. ದ್ವಿಮಾನ ಚಿತ್ರಗಳಿಗೆ, ಚಲನೆ ಕೊಡುವ ಕಸರತ್ತು ಪ್ರಾಚೀನ ಕಾಲದಿಂದಲೂ ಮನುಷ್ಯ ಪ್ರಯತ್ನಿಸುತ್ತಿದ್ದು ಅದರ ಪ್ರಯತ್ನದಿಂದಾಗೇ ತೊಗಲು ಗೊಂಬೆ ಆಟ ಅಥವಾ ನೆರಳು (Sillout) ಗೊಂಬೆ ಆಟ ಬೆಳೆದಿರಬಹುದು. ಆಧುನಿಕ ಯುಗದಲ್ಲಿ ಫೋಟೋಗ್ರಾಫಿಯಿಂದ ಹಿಡಿದು ಮೋಶನ್ ಪಿಕ್ಚರ್ಸ್ ಆವಿಷ್ಕಾರವಾದುದರ ಹಿನ್ನೆಲೆಯಲ್ಲಿ ನೋಡಿದರೆ ಈ ಚಿತ್ರಗಳ ಚಲನೆಯನ್ನು ತಾಂತ್ರಿಕ ರೀತಿಯಲ್ಲಿ ಬೆಳವಣಿಗೆ ಹೊಂದಿದ್ದರೂ ನೆರಳುಗೊಂಬೆ ಆಟ ಇನ್ನ ತನ್ನ ಜೀವಂತಿಕೆ ಉಳಿಸಿಕೊಂಡಿದೆ.



ಗೊಂಬೆ ಮನೆಯ ಒಳಗೆ ಗೊಂಬೆ ಆಟಗಾರರು

ತೊಲುಗೊಂಬೆ ಆಟದಲ್ಲಿ ಗೊಂಬೆ ಆಡಿಸುವವ ನಿಂತುಕೊಂಡೂ ಗೊಂಬೆ ಕುಣಿಸುವ ರೂಢಿಯೂ ಉಂಟು. ಅದಕ್ಕೆ ಒಂದು 8 X 8 ಅಡಿ ಉದ್ದ ಅಗಲದ ಬಿಳಿ ಪಾರದರ್ಶಕ ಪರದೆ ಬಳಸಬಹುದು. ಕೆಲವೊಂದು ಸಾರಿ ಇದಕ್ಕೂ ದೊಡ್ಡದಾದ ಬಿಳಿ ಪರದೆ ಉಪಯೋಗಿಸಬಹುದು. (ಉದಾ: 70mm ಸ್ಕ್ರೀನ್ ತರಹ) ಈ ಪರದೆಯನ್ನು ನೆಲದಲ್ಲಿ ಹೂತ ಎರಡು ಕಂಬಕ್ಕೆ ಬಿಗಿಯಾಗಿ ನಾಲ್ಕೂ ಬದಿ ಎಳೆದು ಕಟ್ಟುತ್ತಾರೆ. ಮೇಲುಗಡೆ ಯಾವ ಹೊದಿಕೆ ಇರುವುದಿಲ್ಲ. ಆದರೆ ಎರಡೂ ಬದಿಯನ್ನು ಅಪಾರದರ್ಶಕ ಬಟ್ಟೆಯಿಂದ ಮುಚ್ಚಿರುತ್ತಾರೆ. ಗೊಂಬೆ ಆಟಗಾರ ಈ ಪರದೆ ಹಿಂದೆ ನಿಂತುಕೊಂಡು ವಾದ್ಯಗಾರರ ತಾಳಕ್ಕೆ ತಕ್ಕಂತೆ ತಾನೂ ಕುಣಿಯುತ್ತಾ ಗೊಂಬೆಗಳನ್ನು ಕುಣಿಸುತ್ತಾ ಆಡಿಸುತ್ತಾನೆ. ಮೂರರಿಂದ ನಾಲ್ಕು ಜನ ಅಥವಾ ಒಬ್ಬನೆ ಗೊಂಬೆ ಆಟದ ಕಲಾವಿದ ಒಂದು ಪ್ರದರ್ಶನವನ್ನು ನಡೆಸಿಕೊಡಬಹುದು. ಹಿನ್ನೆಲೆ ಸಂಗೀತಗಾರರು ಪರದೆಯ ಒಳಗೆ ಪ್ರೇಕ್ಷಕರಿಗೆ ಕಾಣದಂತೆ ಕುಳಿತುಕೊಳ್ಳಬಹುದು ಅಥವಾ ಪ್ರೇಕ್ಷಕರಿಗೆ ಕಾಣುವಂತೆ ಒಂದು ಬದಿಯಲ್ಲಿಯೂ ಕುಳಿತುಕೊಳ್ಳಬಹುದು. ಮೋಜಿನ ಸಂಗತಿಯೆಂದರೆ ಈ ಆಟದಲ್ಲಿ ಬಿಳಿಪರದೆಯ ಹಿಂದೆಯೂ ಈ ಆಟವನ್ನು ಗೊಂಬೆ ಆಟವಾಗಿ ನೋಡುವ ರೂಢಿಯೂ ಇದೆ. ಅಂದರೆ ಏಕಕಾಲಕ್ಕೆ ಇದು ಗೊಂಬೆ ಆಟವೂ ಆಗಿ ನೆರಳೂ ಆಟವನ್ನಾಗಿಯೂ ವೀಕ್ಷಿಸಬಹುದಾದ ಸಾಧ್ಯತೆ ಇದೆ.

ಈ ಆಟದಲ್ಲಿ ಕುಳಿತುಕೊಂಡು ಗೊಂಬೆ ಆಡಿಸುವ ರೂಢಿಯೂ ಇದೆ. ಈ ಪದ್ಧತಿಯಲ್ಲಿ ಗೊಂಬೆಗಳು ಬಹಳ ಹೆಚ್ಚಿಗೆ ಅಂದರೆ 3 ಅಡಿ ಎತ್ತರವಾಗಿರುತ್ತದೆ. ಆದರೆ ಹೆಚ್ಚಿಗೆ ಕುಸುರಿ ಕೆಲಸ ಮಾಡಿದ ಗೊಂಬೆಗಳಿರುತ್ತವೆ. ಗೊಂಬೆಗಳ ವಿನ್ಯಾಸದಲ್ಲಿ ಅಲ್ಲಲ್ಲಿ ಕೆಲ ಜಾಯ್ಂಟ್ಸ್ ಮಾಡಿದ ಆ ಭಾಗಗಳನ್ನು ಚಲನೆ ಮಾಡಿ ಗೊಂಬೆಗೆ ಜೀವ ತುಂಬುವ ಮತ್ತು ಗೊಂಬೆಗಳ ನೆರಳಿನ ಶೇಪ್‌ಗಳಲ್ಲಿ ವೈವಿಧ್ಯತೆ ಹುಟ್ಟಿಸಿ ಆಟ ಕಟ್ಟುವ ರೀತಿಯನ್ನು ಕಲಾವಿದ ಕರಗತ ಮಾಡಿಕೊಂಡಿರುತ್ತಾನೆ.

ಜನಪದ ತೊಗಲು ಗೊಂಬೆಯ ಆಟಗಾರರು ಸ್ಥಳೀಯವಾಗಿ ಸಿಗುವ ಬೊಂಬುಗಳ ಹಗ್ಗವನ್ನು ಉಪಯೋಗಿಸಿ ರಂಗಸ್ಥಳವನ್ನು ನಿರ್ಮಿಸಿಕೊಳ್ಳುತ್ತಾನೆ. ನೆಲದಿಂದ ಲಂಬವಾಗಿ ನಿಲ್ಲಿಸಲು 7 ಅಡಿಯ ನಾಲ್ಕು ಗಟ್ಟಿಯಾದ ಬೆತ್ತದ ಕೋಲು ಅದಕ್ಕೆ ಕೆಳಗೆ 1.5 ಅಡಿ ಅಂತರದಲ್ಲಿ ನಾಲ್ಕು ಕೋಲುಗಳಿಗೆ ರಂಧ್ರ ಕೊರೆದಿದ್ದು, ಮೇಲುಗಡೆ ಅರ್ಧ ಅಡಿ ಬಿಟ್ಟ ರಂಧ್ರ ಕೊರೆದಿರುತ್ತಾರೆ. ಆ ರಂಧ್ರದಲ್ಲಿ ನೆಲಕ್ಕೆ ಸಮಾನಾಂತರವಾದ 5 ಅಡಿಯ ನಾಲ್ಕು ಕೋಲುಗಳನ್ನು ರಂಧ್ರದಲ್ಲಿ ಸಿಕ್ಕಿಸುತ್ತಾರೆ. ಮೇಲೆ ಕೆಳಗೆ 3 ಅಡಿಯ ಕೋಲುಗಳನ್ನು ಅಡ್ಡವಾಗಿ ರಂಧ್ರ ಮಾಡಿ ಸಿಕ್ಕಿಸಿ ಇಡಿ ಕೋಲಿನ ಹಂದರವನ್ನು ಆಯತಾಕಾರವಾಗಿಸಿ ಹಗ್ಗದಿಂದ ಬಿಗಿಯುತ್ತಾರೆ. ಪಾರ್ಶ್ವ ಮತ್ತು ಕೆಳಗಿನ ಭಾಗವನ್ನು ಕಪ್ಪು ಪರದೆಯಿಂದ ಮುಚ್ಚಿ ಪ್ರೇಕ್ಷಕರಿಗೆ ಕಾಣುವ ಭಾಗವನ್ನು ಪಾರದರ್ಶಕವಾದ ಬಿಳಿಪರದೆ ಮೂಲಕ ಮುಚ್ಚುತ್ತಾರೆ. ಆ ಪರದೆಗೆ ಹೊಂದಿ ಒಳಗಡೆ ಪ್ರೇಕ್ಷಕರಿಗೆ ಕಾಣದಂತೆ ಒಂದು ಲ್ಯಾಂಡಿಂಗ್ ರೋಪ್ ವ್ಯವಸ್ಥೆ ಮಾಡಿಕೊಂಡಿದ್ದು, ಅದು ಗೊಂಬೆಗಳನ್ನು ಸ್ಕ್ರೀನಿನ ಯಾವ ಭಾಗದಲ್ಲಿ ಬೇಕಾದರೂ ಸಿಕ್ಕಿಸಲು ಬರುವಂತೆ ವ್ಯವಸ್ಥೆ ಮಾಡಿಕೊಳ್ಳಲಾಗುತ್ತದೆ. ಮೂರು ನಾಲ್ಕು ಗೊಂಬೆಗಳು ಪರದೆ ಮೇಲೆ ಬಂದಾಗ ಈ ವ್ಯವಸ್ಥೆ ಅನುಕೂಲವಾಗಿರುತ್ತದೆ. ಜನಪದ ತೊಗಲು ಗೊಂಬೆ ಆಟಗಾರರು ಮಾಡಿಕೊಂಡ ಈ ಸುಲಭ ವ್ಯವಸ್ಥೆಯನ್ನೇ ಆಧುನಿಕವಾಗಿ ಕೆಲ ಗೊಂಬೆ ಮನೆಯ ಸುಧಾರಣಾ ರೂಪಗಳನ್ನು ಗೊಂಬೆ ಆಟಗಾರರು ಮಾಡಿಕೊಂಡಿರುತ್ತಾರೆ.



ಗೊಂಬೆ ಆಟದ ರಂಗಸ್ಥಳವನ್ನು ಸಿದ್ಧಪಡಿಸಿಕೊಳ್ಳುತ್ತಿರುವ ಜನಪದ ಗೊಂಬೆ ಆಟಗಾರರು

ಶಾಲಾ ಮಕ್ಕಳ ಕೊಠಡಿಯಲ್ಲಿ ಮಕ್ಕಳಿಗಾಗಿ ಅಲ್ಲೇ ಸಿಗುವ ಮೇಜು ಅಥವಾ ಕಪ್ಪು ಹಲಗೆಯ ಸ್ಟ್ಯಾಂಡ್ ಬಳಸಿ ಗೊಂಬೆ ಆಟದ ರಂಗ ಸಜ್ಜಿಕೆ ಸಿದ್ಧಪಡಿಸಬಹುದು. ಒಂದು ಪಾರದರ್ಶಕ ಬಿಳಿ 4' X 3' ಅಡಿ ಉದ್ದಗಲದ ಬಟ್ಟೆ ಹಾಗೂ ಅದರ ಹಿಂದೆ ತೂಗು ಹಾಕಲು ಒಂದು 60 ವೋಲ್ಟ್ ಬಲ್ಬಿನ ಬೆಳಕಿನ ವ್ಯವಸ್ಥೆ ಇದ್ದರೆ ಸಾಕು ಅಥವಾ ಚಿಕ್ಕ ಎಮರ್ಜೆನ್ಸಿ ಲ್ಯಾಂಪ್ ಇದ್ದರೂ ನಡೆಯುತ್ತದೆ. ಎರಡು ಮೇಜುಗಳನ್ನು ಜೋಡಿಸಿ ಅದಕ್ಕೆ ಬಿಗಿಯಾಗಿ ಎರಡು ತುದಿಗೆ ಅತ್ತ ಇತ್ತ 8 ಅಡಿ ಕೋಲು ಕಟ್ಟಿ ಆ ಕೋಲಿಗೆ ಬಿಳಿ ಪರದೆ ಕಟ್ಟಿ, ಪಕ್ಕದ ಪಾರ್ಶ್ವ ಭಾಗವನ್ನು ಚಾಪೆ ಗುಡಾರ ಅಥವಾ ಬಟ್ಟೆಯಿಂದ ಗೊಂಬೆ ಆಟಗಾರರು ಕಾಣದಂತೆ ಮುಚ್ಚಿದರೆ ಸಾಕು ತೊಗಲು ಗೊಂಬೆ ಆಟದ ವೇದಿಕೆ ಸಿದ್ಧವಾಗುತ್ತದೆ. ಮೇಜಿನ ಮೇಲೆ ಕುಳಿತುಕೊಂಡೇ ಗೊಂಬೆ ಆಟಗಾರ ಗೊಂಬೆ ಆಡಿಸಬಹುದು.

## 2.14 ಬೆಳಕಿನ ವ್ಯವಸ್ಥೆ:

ಸೂತ್ರದ ಗೊಂಬೆ ಆಟಕ್ಕೆ ಸಲಾಕೆ ಹಾಗೂ ಕೈಗವಸು ಗೊಂಬೆ ಆಟಕ್ಕೆ ಬೆಳಕಿನ ವ್ಯವಸ್ಥೆ ಬೇಕಾಗಿಲ್ಲ. ಈ ಗೊಂಬೆ ಆಟಗಳನ್ನು ಬೆಳಗಿನ ಹೊತ್ತಿನಲ್ಲಿಯೂ ಮಾಡಬಹುದು. ಆದರೆ ತೊಗಲು ಗೊಂಬೆ ಆಟಕ್ಕೆ ಬೆಳಕಿನ ಆಕರದ ವ್ಯವಸ್ಥೆ ಬೇಕೆ ಬೇಕು. ಹಾಗೆಯೇ ಪ್ರೇಕ್ಷಾಗ್ರಹವೂ ಸೇರಿದಂತೆ ಇಡೀ ರಂಗಸ್ಥಳವೂ ಕತ್ತಲಾಗಿದ್ದು ಗೊಂಬೆ ಆಟ ನಡೆಯುವ ಸ್ಥಳ ಮಾತ್ರ ಬೆಳಗಿದರೆ ಪ್ರದರ್ಶನ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಶಾಲೆಯ ಕ್ಲಾಸರೂಮಗಳಲ್ಲಿ ಬೆಳಗಿನ ಹೊತ್ತು ತೊಗಲು ಗೊಂಬೆಯಾಟ (ನೆರಳುಗೊಂಬೆ ಆಟ) ಆಡುತ್ತಿದ್ದರೆ ಆ ಕೊಠಡಿಯನ್ನು ಮೊದಲು ಕತ್ತಲು ಮಾಡಿಕೊಳ್ಳಬೇಕು. ಈ ಅವಶ್ಯಕತೆ ಉಳಿದ ಮೂರು ಮಾದರಿಯ ಗೊಂಬೆ ಆಟಕ್ಕೆ ಇರುವುದಿಲ್ಲ. ಹಾಗಿದ್ದಾಗ್ಯೂ ಇತ್ತೀಚೆಗೆ ಆಧುನಿಕ ಬೆಳವಣಿಗೆಯಾಗಿ ಸೂತ್ರ, ಸಲಾಕೆ, ಕೈಗವಸು ಗೊಂಬೆ ಆಟಗಳಲ್ಲಿಯೂ ಬೆಳಕಿನ ವಿವಿಧ ವಿನ್ಯಾಸ ಮಾಡಿ ಪ್ರದರ್ಶನದ ಪರಿಣಾಮ ರಮ್ಯತೆಯನ್ನು ಹೆಚ್ಚಿಸುವ ಪ್ರಯತ್ನಗಳು ನಡೆದಿವೆ.




ಆಧುನಿಕ ಗೊಂಬೆಯಾಟಕ್ಕಾಗಿ ಬೆಳಕಿನ ವ್ಯವಸ್ಥೆಯ ನಕ್ಷೆ

ಸೂತ್ರ, ಸಲಾಕೆ ಹಾಗೂ ಕೈಗವಸು ಗೊಂಬೆ ಆಟದಲ್ಲಿ ಬೆಳಕಿನ ಆಕರ ಉದಾಹರಣೆಗೆ ಸ್ಪಾಟ್ ಲೈಟ್‌ಗಳನ್ನು ಪ್ರೊಸೀನಿಯಂ ಆರ್ಚನೆದುರಿನಿಂದ ಹಾಗೂ ಪಾರ್ಶ್ವದಿಂದ ಕೊಡಬಹುದು. ಹಾಗೂ ಹಿಂಬದಿಯಿಂದಲೂ ಕೊಡಬಹುದು. ಬಣ್ಣ ಬಣ್ಣದ ಬೆಳಕಿನ ಲೈಟ್‌ಗಳನ್ನು ಬಳಸಿ ಪರಿಣಾಮ ಹೆಚ್ಚಿಸಬಹುದು. ಹಿಂದೆ ಹಳ್ಳಿಗಳಲ್ಲಿ ಸಾದಾ ಒಂದು ದೊಂದಿಯನ್ನು ಹಚ್ಚಿ ಬೆಳಕಿನ ವ್ಯವಸ್ಥೆ ಮಾಡಿಕೊಳ್ಳುತ್ತಿದ್ದರು. ಮುಂದೆ ಪೆಟ್ರೋಮ್ಯಾಕ್ಸ್ ಬಳಕೆ, ಈಗ ವಿದ್ಯುತ್ಶಕ್ತಿಯ ಅನುಕೂಲವಿರುವುದರಿಂದ ಅದರ ಬಳಕೆಯನ್ನು ಮಾಡುವ ರೂಢಿ ಸಾಮಾನ್ಯವಾಗಿದೆ.



ಸಲಾಕೆ, ಸೂತ್ರ ಹಾಗೂ ಕೈಗವಸು
ಗೊಂಬೆಯಾಟದ ಸಿದ್ಧಮಾದರಿಯ
ರಂಗಸಜ್ಜಿಕೆ

ಗೊಂಬೆಗಳು ಸೂಕ್ಷ್ಮ ವಸ್ತುಗಳಿಂದ, ಬಟ್ಟೆ ಕಾಗದಗಳಿಂದ ಮಾಡಿರುವುದರಿಂದ ಪ್ರಖರವಾದ ಅಪಾಯಕಾರಿ ಬೆಳಕಿನ ಆಕರಗಳನ್ನು ಬಳಸಬಾರದು. ರಂಗಸಜ್ಜಿಕೆ ಚಿಕ್ಕದಿರುವುದರಿಂದ ಗೊಂಬೆಗಳು ಪ್ರದರ್ಶನ ವೇಳೆಯಲ್ಲಿ ಸುಟ್ಟು ಹೋಗುವ ಅಪಾಯವಿರುವುದು ಆದ್ದರಿಂದ ಎಚ್ಚರಿಕೆವಹಿಸಬೇಕು. ಈಗಾಗಲೇ ಹೇಳಿಂದತೆ ಸೆರಳು ಗೊಂಬೆ ಆಟಕ್ಕೆ ಬೆಳಕಿನ ಆಕರವನ್ನು ಹಿಂದಿನಿಂದಲೇ ಗೊಂಬೆಗಳಿಗೆ ಅಡ್ಡವಾಗಿ ಸಿದ್ಧಪಡಿಸಿಕೊಳ್ಳಬೇಕು. ಮುಂದಿನಿಂದ ಬೆಳಕಿನ ವ್ಯವಸ್ಥೆ ಮಾಡಿಕೊಂಡರೆ ಗೊಂಬೆಗಳು ಕಾಣಿಸುವುದಿಲ್ಲ. ಜೀವಂತ ನಟರ ರಂಗಭೂಮಿಯಲ್ಲಿಯಂತೆ ಗೊಂಬೆ ಆಟದ ರಂಗಭೂಮಿಯಲ್ಲಿ ಬೆಳಕಿನ ಬಣ್ಣ ಬದಲಾವಣೆ ವಿವಿಧ ಪಾರ್ಶ್ವದಿಂದ ಬೆಳಕು ಕೊಡುವುದರ ಮೂಲಕ ಇಡೀ ಕಥೆಯ ಅಥವಾ ಆಟದ ಮೂಡಿನಲ್ಲಿ ವೈವಿಧ್ಯತೆ ತರಬಹುದು. ಗೊಂಬೆ ಆಟದಲ್ಲೂ ಕೂಡಾ Live Theatreನಲ್ಲಿರುವಂತೆ ಬೆಳಕಿನ ಉಪಯೋಗ ಗೊಂಬೆಗಳು ಸ್ಪಷ್ಟವಾಗಿ ಕಾಣಿಸಲು ಹಾಗೂ ವಾತಾವರಣ ನಿರ್ಮಾಣ ಮಾಡಲು ರಮ್ಯತೆ ಹೆಚ್ಚಿಸಲು ಬಳಕೆಯಾಗುತ್ತದೆ. ಬೆಳಕಿನ ಆಕರ ಆದಷ್ಟು ಪ್ರೇಕ್ಷಕರಿಗೆ ಕಾಣದಂತೆ ಗೊಂಬೆ ಆಟಕ್ಕೆ ವ್ಯವಸ್ಥೆ ಮಾಡಿಕೊಂಡರೆ ಆಟದ ಪರಿಣಾಮ ಹೆಚ್ಚುತ್ತದೆ. ಕೆಲವೊಂದು ಗೊಂಬೆ ಆಟಗಳಲ್ಲಿ ಅದರಲ್ಲಿಯೂ ಸಲಾಕೆ ಹಾಗೂ ಕೈಗವಸು ಗೊಂಬೆ ಆಟದಲ್ಲಿ ಗೊಂಬೆ ಆಟದ ರಂಗಸ್ಥಳದ ಹಿಂಭಾಗದಲ್ಲಿ ಕರಿ ಪರದೆ ಬದಲಾಗಿ ಬಿಳಿಪರದೆ ಉಪಯೋಗಿಸಿ ಅದರ ಮೇಲೆ ಬೇರೆ ಬೇರೆ ಬಣ್ಣದ ಬೆಳಕನ್ನು ಚೆಲ್ಲಿ ಅದರ ಮುಂದೆ ಗೊಂಬೆ ಆಟವನ್ನು ಆಡಿದರೆ ಪರಿಣಾಮದಲ್ಲಿ ವೈವಿಧ್ಯತೆ ತರಬಹುದು. ಈ ವ್ಯವಸ್ಥೆಯನ್ನು ಸುಂದರ್ಭಾನುಸಾರ ಬಳಸಿಕೊಳ್ಳಬಹುದು.




ಸೂತ್ರ, ಸಲಾಕೆ ಹಾಗೂ ಕೈಗವಸು ಗೊಂಬೆಯಾಟಕ್ಕೆ ಬೆಳಕಿನ ವ್ಯವಸ್ಥೆ

## 2.15 ಗೊಂಬೆ ಆಟದಲ್ಲಿ ಸಂಗೀತ

ಗೊಂಬೆ ಆಟದಲ್ಲಿ ಸಂಗೀತ ಒಂದು ಅವಿಭಾಜ್ಯ ಅಂಗ. ಹಾಗೆ ನೋಡಿದರೆ ರಂಗಭೂಮಿಗೂ ಸಂಗೀತಕ್ಕೂ ಪೂರ್ವದಿಂದಲೂ ನಂಟು ಉಂಟು. ನಮ್ಮ ಎಲ್ಲ ಜನಪದ ರಂಗ ಕಲೆಗಳೂ ಅಭಿಜಾತ ನಾಟಕಗಳು ಸಂಗೀತಮಯವಾಗಿವೆ. ಸಂಗೀತ ಕಛೇರಿಗಳಲ್ಲಿ ಸಂಗೀತವೇ ಪ್ರಧಾನವಾದರೆ ರಂಗಭೂಮಿಯಲ್ಲಿ ಸಂಗೀತವೂ ಒಂದು ರಂಗಭಾಷೆಯಾಗಿ ಅಸ್ತಿತ್ವದಲ್ಲಿರುತ್ತದೆ. ಭಾವತೀವ್ರತೆಯಲ್ಲಿ, ರಂಗಕ್ರಿಯೆಯ ಪರಿಣಾಮವನ್ನು Emphasis ಮಾಡಲು, ಹಾಗೂ ಒಟ್ಟು ಆಟವನ್ನು ರಸವತ್ತಾಗಿಸಲು ಹಾಡು, ಸಂಗೀತದ ಬಳಕೆ ರಂಗಭೂಮಿಯಲ್ಲಿ ಅವಶ್ಯವಾಗಿ ಬೇಕು. ಕಥೆಯ ಮೂಡಿಗೆ ತಕ್ಕಂತೆ ಬೇರೆ ಬೇರೆ ಸಂಗೀತೋಪಕರಣಗಳ ಬಳಕೆಯಿಂದ ಕಥೆಯ ಮೂಡಿಗೆ ಪೂರಕವಾಗಿ Effects ಕೊಡಬಹುದು. ಇದಕ್ಕೆ ಹಿನ್ನೆಲೆ ಸಂಗೀತವೆಂದು ಹೇಳುತ್ತಾರೆ. ಹಾಗೆ ಒಂದು ದೃಶ್ಯದಿಂದ ಇನ್ನೊಂದು ದೃಶ್ಯಕ್ಕೆ ಶಿಫ್ಟ್ ಆದಾಗ ಎರಡು ದೃಶ್ಯಗಳ ಜೋಡಣೆಯ ಹೊಂದಾಣಿಕೆಗೆ ಬ್ರಿಡ್ಜ್ ಮ್ಯೂಜಿಕ್ ಕೊಡಬಹುದು. ಈ ಸಂಗೀತದ ಹಿನ್ನೆಲೆ ಹಿಂದಿನ ದೃಶ್ಯದ ಮೂಡ್‌ನಿಂದ ಮುಂದಿನ ದೃಶ್ಯದ ಮೂಡಿಗೆ ಟ್ರಾನ್ಸ್‌ಫರ್ ಮಾಡುವಂತಿರಬೇಕು.

ಗೊಂಬೆ ಆಡಿಸುವ ನಟನೇ ಆ ಆಟದಲ್ಲಿ ಬರುವ ಹಾಡನ್ನು ಹಾಡಬಹುದು. ಹಾಗೆ ಓರ್ವ ಹಿನ್ನೆಲೆ ಗಾಯಕ(ಕಿ)ನೂ ಹಾಡಬಹುದು. ಸಾಮಾಜಿಕ ಅರಿವು ಮೂಡಿಸುವ ಕಥಾ ವಸ್ತು ಇದ್ದರೆ ಮೇಳ ಸಂಗೀತದ ಬಳಕೆ ಮಾಡಿದರೆ ಉತ್ತಮ ಪರಿಣಾಮ ಬೀರಬಹುದು. ಶಾಲೆಯಲ್ಲಿ ದೊರೆಯುವ ಬ್ಯಾಂಡ್‌ಸೆಟ್, ಲೇಜಿಮ್ ಢೋಲಕ್, ಹಲಿಗೆ, ತಮ್ಮಟೆ, ಬಳಸಿ ಗೊಂಬೆ ಆಟಕ್ಕೆ ಸಂಗೀತದ ಹಿನ್ನೆಲೆಯನ್ನೂ ಪರಿಣಾಮಕಾರಿಯಾಗಿಯೂ ನೀಡಬಹುದು. ಇನ್ನು ಹೆಚ್ಚು ಹಣಕಾಸಿನ ಅನುಕೂಲ ಇದ್ದರೆ ತಬಲಾ, ಢೋಲಕ್ ಹಾರ್ಮೋನಿಯಂ ಮತ್ತು ಸಿಂಥಸಾಯಿಜರ್ ಬಳಕೆ ಮಾಡಬಹುದು. ಈಗ ರಿಕಾರ್ಡಿಂಗ್ ಅನುಕೂಲವಿರುವುದರಿಂದ ಇಡೀ ಆಟದ ಸಂಗೀತವನ್ನು ಪೂರ್ವಭಾವಿಯಾಗಿ ಕಂಪೋಸ್ ಮಾಡಿ ರಿಕಾರ್ಡ್ ಮಾಡಿಕೊಂಡು ಒಂದು cassetteನಲ್ಲಿ ಅಥವಾ CDಯಲ್ಲಿ ದಾಖಲೆ ಮಾಡಿಕೊಂಡು ಪ್ರದರ್ಶನಕ್ಕೆ ಬಳಸಬಹುದು. ಇದಕ್ಕೆ ಸರಿಯಾದ ತಾಲೀಮಿನಿಂದ ಗೊಂಬೆ ಆಟಗಾರ ತನ್ನ ಸಂಭಾಷಣೆ ಮತ್ತು ಗೊಂಬೆಗಳ ಚಲನೆಗೆ ಸರಿಯಾಗಿ ಸಮಯ ಸಿಂಕ್ರೊನಾಯಿಜ್ ಮಾಡಿಕೊಳ್ಳಬೇಕಾಗುತ್ತದೆ. ಲೈವ್ ಮ್ಯೂಸಿಕ್‌ನ ಪರಿಣಾಮ ಲೈವ್ ಆಗಿದ್ದು, ಕಲಾವಿದರು ದೊರಕುವ ಅನುಕೂಲವಿದ್ದರೆ ಲೈವ್ ಮ್ಯೂಸಿಕ್ ಬಳಕೆ ಹೆಚ್ಚು ಸೂಕ್ತವಾದದ್ದು. ಕಲಾವಿದರು ದೊರೆಯುವ ಅನುಕೂಲವಿರದಿದ್ದರೆ, ಮುಂಚಿತವಾಗಿ ರಿಕಾರ್ಡ ಮಾಡಿಕೊಂಡ ಸಿಡಿ ಅಥವಾ ಕ್ಯಾಸೆಟ್‌ಗಳ ಬಳಕೆ ಮಾಡಿ ಬಹಳಷ್ಟು ಪ್ರದರ್ಶನ ನೀಡಬಹುದು. ಸ್ವಲ್ಪ ಮಟ್ಟಿಗೆ ಆರ್ಥಿಕವಾಗಿಯೂ ಇದು ಅನುಕೂಲಕರ. ಇನ್ನು ಬಹಳ ಸರಳವಾಗಿ ಮ್ಯೂಜಿಕ್ ಹಿನ್ನೆಲೆಗೆ ಕೇವಲ ಒಂದು ಢೋಲಕ್ ವಾದ್ಯವನ್ನು ಸಮರ್ಥವಾಗಿ ಬಳಸಿಕೊಳ್ಳಬಹುದು. ಗೊಂಬೆ ಆಟಕ್ಕೆ ಮ್ಯೂಜಿಕ್ ಎಫೆಕ್ಟ್ ಕೊಡಲು ಕೇವಲ ಬೆಲೆಯುಳ್ಳ ಸಿದ್ಧ ಮಾದರಿಯ ಸಂಗೀತೋಪಕರಣಗಳೇ ಬೇಕೆಂದೇನಿಲ್ಲ. ಮಕ್ಕಳು ಬಾರಿಸುವ ಪೀಪಿ, ಚಿಟಿಕೆ ಚಿಪ್ಪು ಬೊಂಬು, ಸಣ್ಣ ಸಣ್ಣ ಗಂಟೆಯಂತಹ ಆಟಿಕೆಗಳೂ ಗೊಂಬೆ ಆಟದಲ್ಲಿ ಸಂಗೀತೋಪಕರಣಗಳಾಗಿ ಬಳಕೆ ಮಾಡಬಹುದು. ಮಕ್ಕಳಿಗಂತೂ ತಾವು ಆಡುವ ಆಟಿಕೆಗಳೇ ಸಂಗೀತೋಪಕರಣಗಳಾಗಿ ಬಳಕೆಯಾದರೆ ಇನ್ನೂ ಸಂತೋಷಪಡುತ್ತಾರೆ. ಗೊಂಬೆ ಆಟಕ್ಕೆ ಈ ಸಾಧ್ಯತೆ ಹೆಚ್ಚು. ಗೊಂಬೆ ಆಟಕ್ಕೆ ಜನಪದ ಮೂಲ ಇರುವುದರಿಂದ ಹಾಡು, ಸಂಗೀತ ಅದರ ಅವಿಭಾಜ್ಯ ಅಂಗವಾಗಿದೆ.

# ಅನುಬಂಧ (Appendix)

## ಸಂಪನ್ಮೂಲ ವ್ಯಕ್ತಿಗಳು ಹಾಗೂ ಸಂಘ ಸಂಸ್ಥೆಗಳು
## (Resources Persons and Puppet Theatre Institutions)



### 1. Smanvaya Pavanataka Sangham: Kozikod Kerala.

1993ರಲ್ಲಿ ಟಿ.ಪಿ. ಕುನ್ನಿರಾಮನ್ ಎಂಬುವವರು ಸಿ.ಸಿ.ಆರ್.ಟಿ.ಯಿಂದ ಗೊಂಬೆ ಆಟದಲ್ಲಿ ತರಬೇತಿ ಪಡೆದ ಅನುಭವದೊಂದಿಗೆ ಕೇರಳದ ಕಾಲಿಕತ್‌ನಲ್ಲಿ ಈ ಸಂಸ್ಥೆ ಸ್ಥಾಪಿಸಿ ಗೊಂಬೆ ಆಟ ಕುರಿತು ವ್ಯಾಪಕವಾದ ಸಂಶೋಧನೆ, ಪ್ರಯೋಗಗಳನ್ನು ಮಾಡುತ್ತಾ ಬಂದಿದ್ದಾರೆ. ಈ ಸಂಘ ಪ್ರತಿವರ್ಷ ಗೊಂಬೆ ಆಟ ಕುರಿತ ಚರ್ಚೆ, ಉಪನ್ಯಾಸ ಉತ್ಸವಗಳನ್ನೂ ಮಾಡುತ್ತಾರೆ. ಆಧುನಿಕ ಪ್ರಯೋಗ, ಪರಂಪರೆ ಗೊಂಬೆ ಆಟದ ಬಗ್ಗೆ ಕಾಳಜಿಯನ್ನು ಇಟ್ಟುಕೊಂಡ ಈ ಸಂಸ್ಥೆ 'ಪಪೆಟ್' ಎಂಬ ತ್ರೈಮಾಸಿಕ ಪತ್ರಿಕೆಯನ್ನೂ ಹೊರತರುತ್ತಾರೆ. 15ಕ್ಕೂ ಹೆಚ್ಚು ಗೊಂಬೆ ಆಟಗಳನ್ನು ಈ ತಂಡದವರು ಈವರೆಗೆ ಕೇರಳದಲ್ಲಿ ಹಾಗೂ ಆಚೆಗೂ ಪ್ರದರ್ಶನ ನೀಡಿದ್ದಾರೆ. ಹೆಚ್ಚಾಗಿ ಸೂತ್ರದ ಗೊಂಬೆ ಆಟವನ್ನು ಇವರು ಮಾಡುತ್ತಾರೆ. ಓ.ಪಿ. ಕುನ್ನಿರಾಮನ್ ಇವರೇ ಗೊಂಬೆಗಳ ವಿನ್ಯಾಸ ಮಾಡುತ್ತಾರೆ. ಮೋಹನ ನೊಚಾತ್, ಅನಿಲ್ ಆಯನ್ ಚೆರಿ, ಅಖಿಲ್ ವಿ.ಸಂಜೀವನ್ ಮುಂತಾದವರು ಈ ಸಂಸ್ಥೆಯ ಗೊಂಬೆ ಆಟಗಾರರು. "ಸ್ವರ್ಗಯಾತ್ರೆ", ಪಂಚತಂತ್ರಮ್, ಸ್ವತಂತ್ರೀಯ ಸ್ಮೃತಿ, ವಡಕನ್ ಪಟ್ಟು ಇತ್ಯಾದಿ ಇವರ ಪ್ರಮುಖ ಆಟಗಳು ಸಮಗ್ರ ಗ್ರಾಮ ನೈರ್ಮಲ್ಯ, ಪ್ರಾಥಮಿಕ ಶಿಕ್ಷಣ, ಪಲ್ಸ್ ಪೋಲಿಯೋ ಈ ಕಾರ್ಯಕ್ರಮ ಕುರಿತಾದ ಗೊಂಬೆ ಆಟಗಳನ್ನು ಮಾಡಿ ಜನರಲ್ಲಿ ಸಾಮಾಜಿಕ ಜಾಗೃತಿ ಮೂಡಿಸುವಲ್ಲಿ ಈ ಸಂಘವು ಕೆಲಸ ಮಾಡುತ್ತಿದೆ. ಅದಲ್ಲದೆ ಶುದ್ಧ ಕಲಾತ್ಮಕವಾಗಿಯೂ ಈ ಮಾಧ್ಯಮವನ್ನು ಬೆಳೆಸುತ್ತಿರುವ ಸಂಸ್ಥೆ ಇದಾಗಿದೆ.



**Address:**
Samanvaya Pavanataka Sangham,
P.O.Ayancheri KoziKode (Dt).
Kerala. 673544
INDIA.
Tele phone No.: 91496, 2591497
Email: samanwayapava@yahoo.com



### 2. Noori Puppet Centre, Hyderabad

ಮಕ್ಕಳ ಸೃಜನಶೀಲ ಅಭಿವ್ಯಕ್ತಿಗೆ ಗೊಂಬೆ ಆಟ, ಚಿತ್ರಕಲೆ, ಕ್ಲೆ ಮಾಡೆಲಿಂಗ್, ತ್ಯಾಜ್ಯ ವಸ್ತುಗಳಿಂದ ಆಟಿಗೆ ತಯಾರಿಕೆ ಇತ್ಯಾದಿ ಕಾರ್ಯಕ್ರಮದ ಜೊತೆಗೆ ಹೆಣ್ಣು ಭ್ರೂಣ ಹತ್ಯೆ ವಿರೋಧ, ವರದಕ್ಷಿಣೆ ಪಿಡುಗು ನಿವಾರಣೆ ಮುಂತಾದ ಸಾಮಾಜಿಕ ವಿಷಯ ಕುರಿತು ಜನರಲ್ಲಿ ಅರಿವು ಮೂಡಿಸುವಲ್ಲಿ ನೂರಿ ಆರ್ಟ ಮತ್ತು ಪಪೆಟ್ ಸೆಂಟರ್ ದೇಶದಾದ್ಯಂತ ಪ್ರದರ್ಶನ, ಕಮ್ಮಟಗಳ ಮೂಲಕ ವ್ಯಾಪಕವಾಗಿ ಕೆಲಸ ಮಾಡುತ್ತಿದೆ. ಶ್ರೀಮತಿ ರತ್ನಮಾಲಾ ನೂರಿ ಹಾಗೂ ಎಸ್.ಎಸ್. ನೂರಿ ಈ ಸಂಸ್ಥೆಯ ರೂವಾರಿಗಳಾಗಿದ್ದಾರೆ. ಅಡಲ್ಟ್ ಎಜುಕೇಶನ್ ಮುಂತಾದ ಯೋಜನೆ ಕುರಿತು ಶಿಕ್ಷಕರಿಗಾಗಿ, ಸಮಾಜ ಕಾರ್ಯಕರ್ತರಿಗಾಗಿ ಗೊಂಬೆ ಆಟ ಕುರಿತು ಪ್ರದರ್ಶನ ತರಬೇತಿಗಳ ಶಿಬಿರಗಳನ್ನೂ ನೂರಿ ಆರ್ಟ್ಸ್ ಮತ್ತು ಪಪೆಟ್ ಸಂಸ್ಥೆ ನಡೆಸಿಕೊಡುತ್ತಾ ಬಂದಿದೆ.



**Address:**
Noori Art and Puppetrty Centre (NAPC)
B. 58, Durgabai Deshmuk Colony,
Hyderabad-500 007 (A.P)
INDIA. Tel: 7614686



## 3. ಮೀನಾ ನಾಯಕ್ ಮುಂಬಯಿ

ರಂಗಭೂಮಿಯ ಕಲಾವಿದೆಯಾದ ಮೀನಾ ನಾಯಕ್ ದರ್ಪಣಾ ಅಕಾಡೆಮಿ ಅಹಮದಾಬಾದ, ಇಲ್ಲಿ ಮೆಹರ್ ಕಂಟ್ರಾಕ್ಟರ್ ಇವರಿಂದ ಗೊಂಬೆ ಆಟದ ತಂತ್ರವನ್ನು ಕಲಿತು, ಮುಂದೆ ಆ ಮಾಧ್ಯಮವನ್ನು ಸಾಮಾಜಿಕ ಸಮಸ್ಯೆಗಳ ವಿಷಯ ಕುರಿತು ಜನರಲ್ಲಿ ಜಾಗೃತಿ ಮೂಡಿಸುವುದಕ್ಕಾಗಿ ಅನುಸಂಧಾನ ಮಾಡುತ್ತಾ ಬಂದಿದ್ದಾರೆ. ಅದರಲ್ಲೂ ಮುಂಬಯಿ ನಗರದ ಕಾಮಾಟಿಪುರದ ದೇಹ ವಿಕ್ರಯ ಮಾಡಿ ಬದುಕುವ ಹೆಣ್ಣುಮಕ್ಕಳಿಗಾಗಿ ಏಡ್ಸ್ ರೋಗದ ಕುರಿತಾದ ಅರಿವು ಹಾಗೂ ಆ ವೃತ್ತಿಯಲ್ಲಿ ತೊಡಗಿದವರು ತೆಗೆದುಕೊಳ್ಳಬೇಕಾದ ಪೂರ್ವಭಾವಿ ಆರೋಗ್ಯದ ಎಚ್ಚರಿಕೆ ಕುರಿತು ಗೊಂಬೆ ಆಟ ಮಾಡಿ ಜನಜಾಗೃತಿಗೆ ಶ್ರಮಿಸಿದ್ದಾರೆ. ಬಾಂಬೆ ಮುನಸಿಪಲ್ ಕಾರ್ಪೋರೇಶನ್ ಇವರು ಮಕ್ಕಳಿಗಾಗಿ ಹಮ್ಮಿಕೊಂಡ ಭಾಷಾ ಬೆಳವಣಿಗೆಯಂತಹ ಕಾರ್ಯಕ್ರಮಗಳನ್ನು ಇವರು ಗೊಂಬೆ ಆಟದ ಮಾಧ್ಯಮದ ಮೂಲಕ ಹಮ್ಮಿಕೊಂಡಿದ್ದರು.



**Address:**
**Meena Nayak,**
**35, KalaSutriæ,**
**Bandra East,**
**Mumbai-400 051**
**Ph: (022) 24126944, 24125575**



## 4. Ishara Puppet Theatre New Delhi

'ದಾದಿ ಪದಮಜಿ' ಇವರದು ಭಾರತೀಯ ಗೊಂಬೆ ಆಟದಲ್ಲಿ ದೊಡ್ಡ ಹೆಸರು, ಗೊಂಬೆ ಆಟಕ್ಕೆ ಆಧುನಿಕ ರೂಪ ಕೊಟ್ಟು ಹಲವಾರು ಪ್ರಯೋಗಗಳನ್ನು ದಾದಿ ಪದಮಜಿ ತಮ್ಮ Ishara Puppet Theatre ಮೂಲಕ ಮಾಡಿದ್ದಾರೆ. ಸಲಾಕೆ, ಗ್ಲೌ, ನೆರಳು ಹಾಗೂ ಸೂತ್ರದ ಗೊಂಬೆ, ಅಲ್ಲದೆ ಮನುಷ್ಯರಿಗೆ ದೊಡ್ಡ ದೊಡ್ಡ ಮುಖವಾಡಗಳನ್ನು ಹಾಕಿ ವಿಶಿಷ್ಟ ರೀತಿಯಲ್ಲಿ ಗೊಂಬೆ ಆಟದ ಪ್ರದರ್ಶನ ನೀಡುವಲ್ಲಿ ಪದಮಜಿ ಸಿದ್ಧ ಹಸ್ತರು. ನೇರವಾಗಿ ಸಾಮಾಜಿಕ ಸಮಸ್ಯೆಗಳ ವಿಷಯ ಕುರಿತು ಇವರು ಗೊಂಬೆ ಆಟ ಮಾಡದಿದ್ದರೂ ಅವರು ತಮ್ಮ ಪ್ರದರ್ಶನಗಳಲ್ಲಿ ಕಲಾತ್ಮಕವಾಗಿ ಸೂಕ್ಷ್ಮವಾಗಿ ಸಾಮಾಜಿಕ ಸಮಸ್ಯೆ ಕುರಿತು ಪ್ರೇಕ್ಷಕರ ಗಮನ ಸೆಳೆಯುತ್ತಾರೆ. ಢೋಲಾಮಾರು, ಸರ್ಕಸ್, ವೇಕಿಂಗ್ ಡ್ರೀಮ್, ಅನೋಖಿವಾಸ್ತು, ತಾಶ್ ತಮಾಶಾ (ಈ ಆಟದಲ್ಲಿ ದೊಡ್ಡ ದೊಡ್ಡ ಮಾಸ್ಕ ಬಳಕೆಯಾಗಿವೆ). ಇತ್ಯಾದಿ ಕಥೆಗಳನ್ನು ಇವರು ಗೊಂಬೆ ಆಟದ ಮೂಲಕ ಪ್ರದರ್ಶಿಸಿದ್ದಾರೆ.



**Address:**
**Dadi Padmaji,**
**B2/2211, Vasant Kunj,**
**New Delhi-110 070.**
**INIDA.**



## 5. Puppet House (ಗೊಂಬೆಮನೆ) ಧಾರವಾಡ.

ನೆರಳು ಗೊಂಬೆ ಆಟದಲ್ಲಿ ಆಧುನಿಕ ಪ್ರಯೋಗ ಮಾಡಿ, ತರಬೇತಿ ಪಡೆದ ನೆರಳು ಗೊಂಬೆ ಆಟಗಾರರ ಒಂದು ರೆಪರ್ಟರಿ ಕಟ್ಟಿ ನಾಲ್ಕು ಹೊಸ ನೆರಳು ಗೊಂಬೆ ಆಟದೊಂದಿಗೆ ಕರ್ನಾಟಕದಲ್ಲಿ ಹಾಗೂ ಕರ್ನಾಟಕದ ಆಚೆಗೂ ನೂರಾರು ಪ್ರಯೋಗಗಳನ್ನು ಕೊಟ್ಟ ಶ್ರೇಯಸ್ಸು ಈ ತಂಡಕ್ಕಿದೆ. 'ಗಾರ್ಧಭ' ಮನುಷ್ಯ ಪ್ರಹಸನ (A MAN OF AN ASS) ಕೆಂಪು ಹೂ, (Red flower), ಹಕ್ಕಿಹಾಡ (The Emperor's Nightingale), ಅಕಟವಿಕಟ ವಿಲಕ್ಷಣ ಕಥೆ (Our Friends The Ogres') ಈ ನಾಲ್ಕು ಕಥೆಗಳನ್ನು ಇವರು ಪ್ರದರ್ಶಿಸಿದ್ದಾರೆ. ಶಿಕ್ಷಣ, ಸಮಾನತೆ, ಸಂಸ್ಕೃತಿ, ಪರಿಸರ ಮಾಲಿನ್ಯ ಇವುಗಳ ಮೇಲೆ ಬೆಳಕು ಚೆಲ್ಲುವ ಕಥೆಗಳು ಇವಾಗಿವೆ. ಇವರು ಗೊಂಬೆ ಆಟದ ಮಾಧ್ಯಮವನ್ನು ಮಕ್ಕಳ ಶಿಕ್ಷಣ ಕ್ರಮದಲ್ಲಿ ಅಳವಡಿಸಲು ಶಿಕ್ಷಕರಿಗೆ ಮಕ್ಕಳಿಗೆ ಕಮ್ಮಟಗಳನ್ನೂ ನಡೆಸಿದ್ದಾರೆ. ಈ ಸಂಸ್ಥೆಯ ಸ್ಥಾಪಕರು ಡಾ.ಪ್ರಕಾಶ ಗರೂಡ ಹಾಗೂ ರಜನಿ ಗರೂಡ.



Address:
Dr. Prakash Garud
C/o. Puppet House,
Suvidha Apartment,
No. 9, IInd Floor, Kabbur Road,
Malmaddi, Dharwad 580 007.
Karnataka, INDIA.
Ph: (0836) 2745460



## 6. ಕವಿತ ಭಟ್ಟ

ಧಾರವಾಡದಲ್ಲಿ ವಾಸಿಸುವ ಈ ಚಿತ್ರ ಕಲಾವಿದೆ. ಜೆ.ಎಸ್.ಎಸ್. ಶಾಲೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಮಕ್ಕಳ ಚಿತ್ರಕಲಾ ಶಿಬಿರಗಳನ್ನು ನಡೆಸಿಕೊಟ್ಟ ಅನುಭವ ಇವರಿಗಿದೆ. ಇಲ್ಲಿಯ ಎರಡೂ ತೊಗಲು ಗೊಂಬೆ ಆಟಗಳಿಗೆ ಚಿತ್ರಗಳನ್ನು ಬಿಡಿಸಿ ಕೊಟ್ಟಿದ್ದಾರೆ.



Address:
Kavita Bhat,
Gopalpur, Malmaddi,
Dharwad
Ph: 9886577567



## 7. ಕೆ.ಕೆ. ವೆಂಕಟೇಶ

ರಂಗಭೂಮಿಯಲ್ಲಿ ಎಮ್.ಎ. ಪದವಿ ಪಡೆದಿದ್ದಾರೆ. ಮಕ್ಕಳ ರಂಗಭೂಮಿ ಹಾಗೂ ಯುವಕರಿಗಾಗಿ ರಂಗಭೂಮಿಯ ಕಾರ್ಯಾಗಾರವನ್ನು ನಡೆಸಿ ಕೊಟ್ಟಿದ್ದಾರೆ. ಗೊಂಬೆ ಮನೆ ತಂಡದ ಸದಸ್ಯರಾಗಿ ಕಳೆದ 5 ವರ್ಷಗಳಿಂದ ತೊಗಲು ಗೊಂಬೆಯಾಟದ ಕಲಾವಿದರಾಗಿ ಸೇವೆ ಸಲ್ಲಿಸಿದ್ದಾರೆ. ILO ಸಂಸ್ಥೆಗಾಗಿ ಬೀದಿ ನಾಟಕಗಳ ಸಂಘದ ಸಂಪಾದಕರಾಗಿಯೂ ಕಾರ್ಯನಿರ್ವಹಿಸಿದ್ದಾರೆ. ವೃತ್ತಿಪರ ನಟರಾಗಿ ರಂಗ ನಿರ್ದೇಶಕರಾಗಿ ಕೆಲಸ ಮಾಡಿದ ಅನುಭವ ಇವರಿಗಿದೆ.



Address:
'Gombe Mane', Malmaddi,
DharwadÀ.
Ph: 9341366088



## 8. ಮುರಾರಿ ಕಾಸರಗೋಡು

ನೀನಾಸಂ ರಂಗಶಿಕ್ಷಣ ಕೇಂದ್ರದಿಂದ ರಂಗಭೂಮಿಯಲ್ಲಿ ಪದವಿ ಪಡೆದಿದ್ದಾರೆ. ಸಲಾಕೆ ಗೊಂಬೆ ಹಾಗೂ ಕೈವಸು ಗೊಂಬೆಗಳ ತಯಾರಿಕೆಯ ಅನುಭವ ಇವರಿಗಿದೆ. ಶಿಕ್ಷಕರಿಗಾಗಿ ಮಕ್ಕಳಿಗಾಗಿ ನಾಟಕ ಹಾಗೂ ಗೊಂಬೆ ಆಟದ ತರಬೇತಿ ನೀಡಿದ ಅನುಭವವೂ ಇವರಿಗಿದೆ. ಸಲಾಕೆ ಗೊಂಬೆ ಆಡಿಸುವುದರಲ್ಲೂ ಇವರು ಸಿದ್ಧ ಹಸ್ತರು.



Address:
'Lalimane', 'Nandimane',
Post: Kudupu, Mangalore,
Ph: 9448627039



## 9. ರಜನಿ ಗರೂಡ

ನೀನಾಸಂ ರಂಗ ಶಿಕ್ಷಣ ಪದವಿ ಪಡೆದ ಇವರು ರಂಗಭೂಮಿ ಮಕ್ಕಳ ಪರ್ಯಾಯ ಶಿಕ್ಷಣ ಮಕ್ಕಳ ರಂಗಭೂಮಿ ಗೊಂಬೆಯಾಟಗಳಲ್ಲಿ ವಿಶೇಷವಾಗಿ ಕೆಲಸ ಮಾಡುತ್ತಿದ್ದಾರೆ. ಗೊಂಬೆಗಳ ವಿನ್ಯಾಸ ಮಾಡುವಲ್ಲಿ ಮಕ್ಕಳಿಗಾಗಿ ಶಿಕ್ಷಕರಿಗಾಗಿ ಕಾರ್ಯಾಗಾರಗಳನ್ನು ನಡೆಸಿಕೊಟ್ಟಿದ್ದಾರೆ. ಸಧ್ಯ ಇವರು ಧಾರವಾಡದಲ್ಲಿ ನೆಲೆಸಿದ್ದು, ಶಿಕ್ಷಣದಲ್ಲಿ ರಂಗಭೂಮಿ ಕುರಿತು ಕಾರ್ಯನಿರ್ವಹಿಸುತ್ತಿದ್ದಾರೆ.



**Address:**
**Rajani Garud,**
**'Suvidha Apartment',**
**Malamaddi, Dharwad,**
**Ph: 2745460**



## 10. ಸದಾಶಿವ ಜಿ.

ರಂಗಭೂಮಿ ಹಾಗೂ ನಾಟಕ ಸಾಹಿತ್ಯದಲ್ಲಿ ಆಸಕ್ತರಾದ ಇವರು ಕ್ರಾಫ್ಟ್‌ನಲ್ಲಿ ವಿಶೇಷ ಪರಿಣಿತಿ ಹೊಂದಿದ್ದು, ಹೊಸ ಹೊಸ ಪ್ರಯೋಗಗಳನ್ನು ಇಲ್ಲಿ ಗೊಂಬೆಗಳ ತಯಾರಿಕೆಯಲ್ಲಿ ಮಾಡಲು ಸಹಕರಿಸಿದ್ದಾರೆ. ಇಲ್ಲಿಯ ಗೊಂಬೆಗಳ ವಸ್ತ್ರ ವಿನ್ಯಾಸವನ್ನು ಇವರು ಮಾಡಿದ್ದಾರೆ. ಸಧ್ಯ ಧಾರವಾಡದಲ್ಲಿ ನೆಲೆಸಿದ್ದಾರೆ.



**Address:**
**Hunagund Compound,**
**Malmaddi, Kabbur Road,**
**Dharwad.**
**Ph: 9342924545**

| | |
|---|---|
| 11. Ajit Rao gurukrupa (Cartoonist) | 78/2 Scheees No. 6, sion Mumbai (022) 24093185. |
| 12. Sunanda Gurav (Visual Artist) | Bangalore |
| 13. Channa Keshawa (Visual Artist) | Bangalore, Deshakal, D-1, Victorian Villa, Alexandar Road, Richmond Town, Bangalore 25 |
| 14. Rajani Garud | Theatre Director, C/o. Puppet House, Suvidha Apartment, (Puppetry & Childrens') No. 9, IInd Floor, Kabburt Road, Malmaddi, Dharwad-580 007. |
| 15. Gurumurthy Vardamul | Stagetist, Post: Vardamu,l, TQ: State Set Designer & Craftmen, Sagar, Dist: Shimogga. |
| 16. Purshottam Talwat | Ninasam Teator Institure Set Designer & Makeup Man Heggodu. Tq: Sagar, Dist: Shimogga, KARNATAKA |

| | |
|---|---|
| 17. Smt. Vaidehi (Play Writer) | Irvantige, Manipal, Dist: Udupi, Karnataka. |
| 18. S.A. Krishnayya | Regional Resource Centre Folk Research Scholar in Folklore Performing Art, MGM College, UDUPI, D.K. Karnataka. |
| 19. Ninasam Theator Institure | Tq: Sagar, Dist: Shimogga, Karnataka |
| 20. K.G. Krishnmurthy | Kinnar Mela, Children's Theator Director, Reperty Heggodu, Tq: Sagar, Dist: Shimogga, Karnataka. |
| 21. Sharada Dabvade | "Soni", Tejaswinagar, Ist Cross, Social Activist Dharwad-580 007, Karnataka. |
| 22. Gayatri Desai (Visual Artist) | Principal, Halbhavi School of Art, Station Road, Malmaddi, Dharwad-580 007, Karnataka |
| 23. Dr. Prakash Garud Theatre Director Puppetier | C/o. Puppet House, Suvidha Apartment, No. 9, IInd Floor, Kabbur Road, Malmaddi, Dharwad-07, Karnataka, INDIA. Ph: (0836) 2745460 |
| 24.Nataraj Honnavally | Theator Director Pupet Playwrite Tumkur, Karnataka |
| 25. Poornima L.K. | Visual Artist Navilemane, Talguppa Tq:Sagar, Dist: Shimogga Karnataka |



ಭಾರತದಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿ ನೂರಾರು ಆಧುನಿಕ ಗೊಂಬೆ ಆಟಗಾರರ ತಂಡಗಳು ಗೊಂಬೆ ಆಟವನ್ನು ಕಲಾತ್ಮಕವಾಗಿ ಬೆಳೆಸುತ್ತಾ ಮತ್ತು ಸಾಮಾಜಿಕ ಸಮಸ್ಯೆ ಕುರಿತು ಅರಿವು ಮೂಡಿಸಲು ಗೊಂಬೆ ಆಟದ ಮಾಧ್ಯಮವನ್ನು ಬಳಸುತ್ತಿದ್ದಾರೆ. ಎಲ್ಲರ ಮಾಹಿತಿಯನ್ನು ಕೊಡುವುದು ಈ ಕಂಪೆಂಡಿಯಮ್ ಸ್ಥಳಾವಕಾಶದ ವ್ಯಾಪ್ತಿಗೆ ಮೀರಿದ್ದು. ಹೆಚ್ಚಿನ ವಿವರಗಳಿಗೆ ಸಂಗೀತ ನಾಟಕ ಅಕಾಡೆಮಿ ನವದೆಹಲಿ, India Foundation For the Art ಬೆಂಗಳೂರು, ಆರ್.ಆರ್.ಸಿ. ಉಡುಪಿ, ಇಲ್ಲಿಂದ ಮಾಹಿತಿ ಪಡೆಯಬಹುದು. ಅಥವಾ www.puppetindia.com ಈ ವೆಬ್‌ಸೈಟ್ ಗಮನಿಸಿ, ಹೆಚ್ಚಿನ ಮಾಹಿತಿ ಪಡೆಯಬಹುದು.



# ಅಭ್ಯಾಸ ಸೂಚಿ (Bibliography)


1. Bhaskar Kamat: "Story of Kogga Kamath's Marionettes", Regional Resource Centre, Man College Campus, UDUPI- 566102, 1965

2. Leena Sarabai: "Opening the Door", Shreyas Publication, Ahamadabad, 1986

3. Tokio Oga: "Bunraku", Hoikusha Publishing Co., Ltd., 8-6-4 Chome Tsurumi, Japan 1984

4. Gita Wolf & Anushka Ravi Shankar: "Puppets Unlimited", Tara Publishing Good Boobs Pvt., Ltd., Pratibha Avenue Chennai 1998.

5. Dadi Padmji & Swapna Sen & Others: "Festival of Contemperary Puppet Theater", 23-27 Sangeet Natak Academy, New Delhi 1998.

6. Katyal Anjum: Seagal Theater Quartarly, Sep 1999 Issue 21 Seagal Publication, Culcutta.

7. Som Benagal, John Carran: Mrunalini Sarabai "Puppet Theater Around the World" Natya, Writer 1960-61, Bharatiya Natya Sangha New Central Market, New Delhi.

8. Mehara R Contractor: "Creative Drama and Puppetry in Education" National Book Trust, India 2001.

9. Jeevan Pani: "Living Dolls", Story of Indian Puppets, Publication Division Ministry of Information and Broadcosting Govt., of India, 1986, Patiala House Jaipur Bajar, New Delhi.

10. Putul Yatra Magazine: National Academy of Music, Dance & Drama, New Delhi, 2006-2007

11. S.A. Krishnayya: Karnataka Puppetry, Regional Resource for Folk Performing Art. MGM College, Udupi, Karnataka.

12. Seminar Report Magazine on : International Seminar on East-West West-East, Puppetry 23-25 March 2003, Sangeet Natak Academy, New Delhi

13. Stuart Blackburn: "Rama Stories and Shadow Puppets", Oxford University Press, Walton Street, Oxford, 1996

14. David Warner and Bill Bower: "Helping the Health Workers Learn Voiluntary Health Association of India, C-14, Community Centre, SPA, New Delhi 10016, 1983.

